CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜೂನ್ ೧೬, ೨೦೦೫ (ಜೇಷ್ಠ ೨೬, ಶಕ ವರ್ಷ ೧೯೨೭) | ಸಂಚಿಕೆ ೨೪ |
|---|---|---|



## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಬಿ.ಐ. ಮಂಕಣಿ, ಎಹೆಚ್‌ಸಿ 113 ಡಿಎಆರ್, ಬಾಗಲಕೋಟೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ಇವರ ಆದೇಶ ಸಂಖ್ಯೆ:ಸಿಬ್ಬಂದಿ-3/ಡಿಇ-15/2002, ದಿನಾಂಕ: 11.08.2003 ಮತ್ತು ಆ.ಪು. ಸಂಖ್ಯೆ: 320/2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಆಫ್ ಜನರಲ್ ಪೊಲೀಸ್, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/99/ಉವ/03, ದಿನಾಂಕ: 12.12.2003.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 02.02.2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/14/2004, ದಿನಾಂಕ: 08.07.2004.

**ಪ್ರಸ್ತಾವನೆ:**

ಶ್ರೀ ಬಿ.ಐ. ಮಂಕಣಿ, ಎಹೆಚ್‌ಸಿ 113, ಡಿಎಆರ್, ಬಾಗಲಕೋಟೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

"ಎಎಚ್‌ಸಿ ಬ.ನಂ.133 ಬಿ.ಐ. ಮಂಕಣಿ ಹಾಗೂ ಎಪಿಸಿ ಬ.ನಂ.240 ಎಸ್.ಎಂ. ಉದಗಟ್ಟಿ ಡಿಎಆರ್, ಬಾಗಲಕೋಟದಲ್ಲಿ ಸೇವೆ ಸಲ್ಲಿಸುತ್ತಿದ್ದು ನೀವು ಬೆಳಗಾಂವಕ್ಕೆ ಗಣೇಶ ವಿಸರ್ಜನೆ ಬಂದೋಬಸ್ತಿ ಕರ್ತವ್ಯಕ್ಕೆ ಹೋದಾಗ ದಿನಾಂಕ: 19.09.2002 ರಂದು ಸಾರ್ವಜನಿಕ ಸ್ಥಳದಲ್ಲಿ ನಿಮ್ಮ ವೈಯಕ್ತಿಕ ದ್ವೇಷದಿಂದ ಕರ್ತವ್ಯದ ನೆಪದಲ್ಲಿ ಒಬ್ಬರಿಗೊಬ್ಬರು ವಾಗ್ವಾದ ಮಾಡಿ ಅವಾಚ್ಯ ಶಬ್ದಗಳಿಂದ ಬೈದಾಡಿ ಅಸಭ್ಯ ರೀತಿಯಿಂದ ವರ್ತಿಸಿ ನಿಮ್ಮ ನಿಮ್ಮ ಕರ್ತವ್ಯದಲ್ಲಿ ಚ್ಯುತಿ ಉಂಟು ಮಾಡಿದ್ದಲ್ಲದೆ ಎಎಚ್‌ಸಿ-113 ನೇದವರು ಎಪಿಸಿ-240 ನೇದವರಿಗೆ ಕರ್ತವ್ಯದಲ್ಲಿ ನಿಷ್ಕಾಳಿಜಿತನ ಪ್ರದರ್ಶಿಸಿದಲ್ಲಿ ಪಾರ್ಟಿಇನ್‌ಚಾರ್ಜ್ ರವರಿಗೆ ವರದಿ ಸಲ್ಲಿಸದೆ ಎಪಿಸಿ-240 ನೇದವರಿಗೆ ಅವಾಚ್ಯ ಬೈದಾಡಿ ಅನುಚಿತವಾಗಿ ವರ್ತಿಸಿ ಎಪಿಸಿ-240 ನೇದವರು ಅದನ್ನೇ ಮಾನಸಿಕ ಮಾಡಿಕೊಂಡು ವಿಷ ಸೇವನೆ ಮಾಡಿ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸುವಂತೆ ಮಾಡಿದ್ದು ಅದೆ. ಅಲ್ಲದೆ ಎಪಿಸಿ-240 ನೇದವರು ಎಎಚ್‌ಸಿ-113 ನೇದವರು ತಮ್ಮ ಕೂಡ ಅನುಚಿತವಾಗಿ ವರ್ತಿಸಿದ ಬಗ್ಗೆ ತನಗೆ ತೊಂದರೆ ಕೊಡುತ್ತಿದ್ದ ಬಗ್ಗೆ ಮೇಲಾಧಿಕಾರಿಗಳಿಗೆ ಗಮನಕ್ಕೆ ತರದೆ ತಾನು ವಿಷ ಪ್ರಾಶನ ಮಾಡಿ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದ್ದು ಇರುತ್ತದೆ. ಶಿಸ್ತಿನ ಇಲಾಖೆಯ ನೌಕರರಾಗಿ ದಕ್ಷತೆಯಿಂದ ಕರ್ತವ್ಯ ನಿರ್ವಹಿಸದೇ ನಿಮ್ಮ ನಿಮ್ಮ ಕರ್ತವ್ಯದಲ್ಲಿ ಘೋರ ಅಶಿಸ್ತು ನಿಷ್ಕಾಳಜಿತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಬಗ್ಗೆ ಇಲಾಖಾ ವಿಚಾರಣೆ ನಡೆಸಿ, ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 11.08.2003ರ ಆದೇಶದಲ್ಲಿ ಅರ್ಜಿದಾರರನ್ನು ಕೆಸಿಎಸ್ ನಿಯಮ 218 ರಡಿ ಕಡ್ಡಾಯ ನಿವೃತ್ತಿಗೊಳಿಸಿದ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಕೆಲವು ಅಂಶಗಳನ್ನು ಗುರ್ತಿಸಿ, ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಿನಾಂಕ: 11.08.2003ರ ಆದೇಶವನ್ನು ರದ್ದುಪಡಿಸಿ, ಅರ್ಜಿದಾರರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಿ, ಅವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ಎರಡು ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ತಡೆಹಿಡಿದು, ಸೇವೆಯಿಂದ ಹೊರಗೆ ಉಳಿದ ಅವಧಿಯನ್ನು ವೇತನ ರಹಿತ ರಜೆ ಎಂದು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 12.12.2003 ರಲ್ಲಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಪರಿಷ್ಕರಣ ಮೇಲ್ಮನವಿ ಸಲ್ಲಿಸಿ, ತಮಗೆ ಅನ್ಯಾಯವಾಗಿದ್ದು, ನ್ಯಾಯ ದೊರಕಿಸಿಕೊಡುವಂತೆ ಕೋರಿರುತ್ತಾರೆ. ಅರ್ಜಿದಾರರ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಹಾಗೂ ಕಂಡಿಕಾವಾರು ಷರಾಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಿಳಿಸಿರುವಂತೆ ತಮ್ಮ ಒಂದು ಅಪರಾಧಕ್ಕೆ ಎರಡು ಶಿಕ್ಷೆ ವಿಧಿಸಿರುವುದಿಲ್ಲ. ಇಲಾಖಾ ವಿಚಾರಣೆಯಲ್ಲಿ ಸಾಕ್ಷ್ಯಾಧಾರಗಳು ಹಾಗೂ ದಸ್ತಾವೇಜುಗಳ ಆಧಾರದ ಮೇಲೆ ಸಾಬೀತಾದುದರ ಮೇರೆಗೆ ಶಿಕ್ಷೆಯನ್ನು ವಿಧಿಸಿದ್ದು ಸರಿ ಇರುತ್ತದೆ. ಮುಂದುವರೆದು, ಸೇವೆಯಿಂದ ಹೊರಗುಳಿದ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿರುವುದು ಶಿಕ್ಷೆ ಎಂದೆನಿಸುವುದಿಲ್ಲ ಏಕೆಂದರೆ, ಅರ್ಜಿದಾರರು ಈ ಅವಧಿಯಲ್ಲಿ ಇಲಾಖೆಯಲ್ಲಿ ಕೆಲಸ ಮಾಡಿರುವುದಿಲ್ಲ. ಈ ಅವಧಿಯಲ್ಲಿ ಸರ್ಕಾರ/ಇಲಾಖೆಗೂ, ಅರ್ಜಿದಾರರಿಗೂ ಯಾವುದೇ ಸಂಬಂಧ ಇಲ್ಲದೇ ಇದ್ದು, ಸದರಿ ಅವಧಿಗೆ ಯಾವುದೇ ವೇತನ ಪಡೆಯಲು ಅರ್ಹರಿರುವುದಿಲ್ಲ. ಅರ್ಜಿದಾರರ ಆರೋಪಕ್ಕೆ ಅನುಗುಣವಾಗಿ ಮೇಲ್ಮನವಿ ಪ್ರಾಧಿಕಾರಿಗಳು ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಾಡು ಮಾಡಿ ಲಘು ಶಿಕ್ಷೆಯನ್ನು ವಿಧಿಸಿರುತ್ತಾರೆ. ಈ ಎಲ್ಲಾ ವಾಸ್ತಾವಾಂಶಗಳ ಹಿನ್ನೆಲೆಯಲ್ಲಿ, ಅರ್ಜಿದಾರರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಲು ಮತ್ತು ಮೇಲ್ಮನವಿ ಪ್ರಾಧಿಕಾರಿಯ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅವಶ್ಯಕತೆ ಇರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 43 ಪೊಸಿಅ 2004, ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಐ. ಮಂಕಣಿ, ಎಎಚ್‌ಸಿ 113, ಡಿಎಆರ್ ಬಾಗಲಕೋಟೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 617 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಕಾನೂನು ಸಚಿವಾಲಯ

**ವಿಷಯ:** ಕರ್ನಾಟಕದಲ್ಲಿ ಶಾಶ್ವತವಾಗಿ ಲೋಕ್ ಅದಾಲತ್‌ಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1) ರಾಷ್ಟ್ರೀಯ ಕಾನೂನು ಸೇವಾ ಪ್ರಾಧಿಕಾರದ ಅರೆ ಸರ್ಕಾರಿ ಪತ್ರ ಸಂಖ್ಯೆ: 6:12:2004-ಎನ್‌ಎಎಲ್‌ಎಸ್‌ಎ:5010 ದಿನಾಂಕ: 18.03.1995.
2) ದಿನಾಂಕ: 06.04.2005 ರಂದು ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡೆವಳಿ.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ರಾಷ್ಟ್ರೀಯ ಕಾನೂನು ಸೇವಾ ಪ್ರಾಧಿಕಾರವು ರಾಜ್ಯ ಸರ್ಕಾರಕ್ಕೆ ಕಳುಹಿಸಿರುವ ಪತ್ರದಲ್ಲಿ ರಾಜ್ಯದಲ್ಲಿ ಖಾಯಂ ಲೋಕ್ ಅದಾಲತ್‌ಗಳನ್ನು ಸ್ಥಾಪಿಸಲು ಕೋರಿದ್ದಾರೆ.

ಈ ಹಿನ್ನೆಲೆಯಲ್ಲಿ ಮೇಲೆ (2) ರಲ್ಲಿ ಓದಲಾದ ಮಾನ್ಯ ಕಾನೂನು ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 06.04.2005 ರಂದು ಸಭೆಯನ್ನು ಕರೆದಿದ್ದು, ಅಲ್ಲಿ ತೀರ್ಮಾನಿಸಿದಂತೆ ಪ್ರಾಥಮಿಕವಾಗಿ ಬೆಂಗಳೂರು, ಮೈಸೂರು, ಮಂಗಳೂರು, ಧಾರವಾಡ, ಬೆಳಗಾಂ ಮತ್ತು ಗುಲ್ಬರ್ಗಾದಲ್ಲಿ ಶಾಶ್ವತ ಲೋಕ್ ಅದಾಲತ್‌ಗಳನ್ನು ಸ್ಥಾಪಿಸಲು ಸಭೆಯು ನಿರ್ಣಯ ತೆಗೆದುಕೊಂಡಿದೆ.

ಅದರಂತೆ ತ್ವರಿತವಾಗಿ ಮೇಲೆ ತಿಳಿಸಿರುವ ನಗರ : ಪಟ್ಟಣಗಳಲ್ಲಿ ಶಾಶ್ವತ ಲೋಕ್ ಅದಾಲತ್‌ಗಳನ್ನು ಸ್ಥಾಪಿಸಲು ಒಂದು ಟಾಸ್ಕ್ ಫೋರ್ಸ್ ಸಮಿತಿ ರಚಿಸಲು ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಸದಸ್ಯರುಗಳನ್ನು ನೇಮಕ ಮಾಡಲು ತೀರ್ಮಾನಿಸಿತು.

**ಸರ್ಕಾರಿ ಆದೇಶ ಸಂಖ್ಯೆ: ಲಾ 61 ಎಲ್‌ಎಡಿ 2002, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2005**

ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿದ ಹಿನ್ನಲೆಯಲ್ಲಿ ಟಾಸ್ಕ್ ಫೋರ್ಸ್ ಸಮಿತಿಯನ್ನು ರಚಿಸಿದ್ದು, ಅದರಲ್ಲಿ ಈ ಕೆಳಕಂಡ ಅಧಿಕಾರಿಗಳನ್ನು ನೇಮಕ ಮಾಡಲಾಗಿದೆ. ಇವರುಗಳು ವಾರಕ್ಕೆ 2 ಬಾರಿ ಸಭೆ ಸೇರಿ ಖಾಯಂ ಲೋಕ್ ಅದಾಲತ್‌ಗಳನ್ನು ಸ್ಥಾಪಿಸುವುದಕ್ಕೆ ಸಂಬಂಧಿಸಿದಂತೆ ಚರ್ಚಿಸಿ, ಇದಕ್ಕೆ ಬೇಕಾದ ನೌಕರರನ್ನು ಸಾರ್ವಜನಿಕ ಉದ್ದಿಮೆಗಳಿಂದ : ಇತರೆ ಇಲಾಖೆಯಿಂದ ತೈನಾತಿ ಮೂಲಕ ಪಡೆಯುವುದು ಹಾಗೂ ಸದರಿ ಲೋಕ್ ಅದಾಲತ್‌ಗಳನ್ನು ತ್ವರಿತವಾಗಿ ಸ್ಥಾಪಿಸಲು ಕ್ರಮ ತೆಗೆದುಕೊಳ್ಳುವುದು.

| | | | |
|---|---|---|---|
| 1) | ಶ್ರೀ ಬೀರಣ್ಣನವರ್, ಅಪರ ಕಾರ್ಯದರ್ಶಿ-3, ಕಾನೂನು ಇಲಾಖೆ. | : | ಅಧ್ಯಕ್ಷರು |
| 2) | ಶ್ರೀ ಮಲ್ಲೇಶಪ್ಪ, ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರ, ಬೆಂಗಳೂರು. | : | ಸದಸ್ಯರು |
| 3) | ಶ್ರೀ ಪ್ರಕಾಶ್, ಉಪ ಕಾರ್ಯದರ್ಶಿ ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರ, ಬೆಂಗಳೂರು. | : | ಸದಸ್ಯರು |
| 4) | ಶ್ರೀ ಎ. ನಾಗೇಂದ್ರ, ಉಪ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ. | : | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಧಾಕೃಷ್ಣ**

ಪಿ.ಆರ್. 618 ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ), ಕಾನೂನು ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಬಿ.ಎಸ್. ಗೀತಾರಾಣಿ, ವೈದ್ಯಾಧಿಕಾರಿ, ಪ್ರಾ.ಆ. ಕೇಂದ್ರ, ಗಂಡಸಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ, ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 648 ಹೆಚ್ಎಸ್ಹೆಚ್ 2002, ದಿನಾಂಕ: 24.8.2002.

2) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಜಿ:ಮೈವಿ:71: 2003-04, ದಿನಾಂಕ: 21.10.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚಯನ್ವಯ ಡಾ: ಬಿ.ಎಸ್. ಗೀತಾರಾಣಿ ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೇಮಕಾತಿ ಹೊಂದಿರುತ್ತಾರೆ. ಅದರಂತೆ ದಿನಾಂಕ: 2.9.2002 ರಂದು ಪ್ರಾಥಮಿಕ ಆರೋಗ್ಯ ಕೇಂದ್ರ, ಗಂಡಸಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ, ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ತದನಂತರ ದಿನಾಂಕ: 1.11.2003 ರಿಂದ 20.11.2003ರ ವರೆಗೆ ಸಂಯುಕ್ತ ರಜೆಯನ್ನು ಕೋರಿ ನಂತರ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಮೇಲೆ ಕ್ರಮಾಂಕ (2) ರಲ್ಲಿನ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಇರುವಾಗಲೇ 120 ದಿನಗಳಿಗೂ ಮೀರಿ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಖಾಯಂಪೂರ್ವ ಸೇವಾ ನಿಯಮಗಳಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಕೋರಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 859 ಹೆಚ್ಎಸ್ಹೆಚ್ 2004, ಬೆಂಗಳೂರು, ದಿನಾಂಕ: 16ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಬಿ.ಎಸ್. ಗೀತಾರಾಣಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ ಗಂಡಸಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ ಇವರು ದಿನಾಂಕ: 1.11.2003 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 1.11.2003 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6 ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಜಗದೀಶಯ್ಯ**

ಪಿ.ಆರ್. 619 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸಿ.ಎಸ್. ಬೆನ್ನೂರು, ಸಿಪಿಐ, ಸಿಓಡಿ ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಐಜಿಪಿ ಈಶಾನ್ಯವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಇವಿ:14:ಈಪ:95-02, ದಿನಾಂಕ: 23.10.2002 ಸಂಖ್ಯೆ: 483:ಈವ:02.

2) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ-8:54:2002-03, ದಿನಾಂಕ: 31.03.2003.

3) ಶಿಸ್ತು ಪ್ರಾಧಿಕಾರಿ ಮತ್ತು ಐಜಿಪಿ, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಇವಿ:14:ಈವ:95-02, ದಿನಾಂಕ: 12.06.2003 ಅ.ಪು. ಸಂಖ್ಯೆ: 325:ಈವ:02.

4) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು ಇವರ ಆದೇಶ ಸಂಖ್ಯೆ: ಸಿಬಿ:8:28:2003-04, ದಿನಾಂಕ: 11.03.2004.

5) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 02.06.2004.

6) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು ಇವರ ಪ.ಸಂ. ಸಿಬಿ:8:28:2003-04, ದಿನಾಂಕ: 07.08.2004.

**ಪ್ರಸ್ತಾವನೆ:**

ಶ್ರೀ ಸಿ.ಎಸ್. ಬೆನ್ನೂರು, ಸಿಪಿಐ ಸಿಓಡಿ ಗುಲ್ಬರ್ಗಾ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965:89ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ:**

"1) ನೀವು ದಿನಾಂಕ: 2.7.95 ರಿಂದ ಬೀದರ್ ನಗರ ವೃತ್ತದ ಸಿ.ಪಿ.ಐ. ಎಂದು ಕೆಲಸ ಮಾಡುತ್ತಿದ್ದಾಗ ದಿನಾಂಕ: 5.9.95, 29.10.95 ಮತ್ತು 14.11.95 ರಂದು ವಿನಾಃ ಕಾರಣ ಮೇಲಾಧಿಕಾರಿಗಳಾದ ಬೀದರ್ ಪೊಲೀಸ್ ಅಧೀಕ್ಷಕರು, ಬೀದರ್, ಪೊಲೀಸ್ ಉಪಾಧೀಕ್ಷಕರು, ಬೀದರ್ ಇವರ ಮೇಲೆ ಇಲ್ಲಸಲ್ಲದ ಆರೋಪ ಮಾಡಿದ್ದು ಅಲ್ಲದೆ ಸಹ ಸಿಬ್ಬಂದಿ ಆರ್.ಪಿ.ಐ., ಡಿ.ಎ.ಆರ್. ಬೀದರ್ ಇವರೊಂದಿಗೆ ಅಸಭ್ಯ ರೀತಿಯಿಂದ ಮತ್ತು ಅಶಿಸ್ತಿನಿಂದ ವರ್ತಿಸಿರುತ್ತೀರಿ".

2) ನೀವು ದಿನಾಂಕ: 8.7.95 ರಿಂದ ಬೀದರ್ ನಗರ ವೃತ್ತದ ಸಿ.ಪಿ.ಐ. ಎಂದು ಕೆಲಸ ಮಾಡುತ್ತಿದ್ದಾಗ ದಿನಾಂಕ: 26/27.10.95, 6/7.11.95 ಮತ್ತು 9/10.11.95 ರಂದು ಬೀದರ್ ನಗರದಲ್ಲಿ ಅಪರಾಧ ತಡೆಗಟ್ಟಲು ರಾತ್ರಿ ಗಸ್ತಿನ ತಪಾಸಣೆ ಕರ್ತವ್ಯಕ್ಕೆ ನೇಮಕರಾಗಿದ್ದು, ಗೈರು ಹಾಜರಾಗಿರುವಿರಿ. ಅಲ್ಲದೇ ದಿನಾಂಕ: 10.11.95ರ ಬೆಳಿಗ್ಗೆ ಬೀದರ್ ನಗರದಲ್ಲಿ ವಾರದ ಸಾಮಾನ್ಯ ಕವಾಯತಿಗೆ ಹಾಜರಾಗಬೇಕಾಗಿದ್ದು ಗೈರುಹಾಜರಾಗಿ ಕರ್ತವ್ಯ ನಿರ್ಲಕ್ಷಿಸಿ ಅಶಿಸ್ತು ತೋರಿಸಿರುತ್ತೀರಿ.

3) ದಿನಾಂಕ: 28.10.95 ರಂದು ಬೀದರ್ ನಗರ ಠಾಣೆಯಲ್ಲಿ ವರದಿಯಾದ ಗುನ್ನೆ ನಂ.201:95, ಕಲಂ.394 ಐಪಿಸಿ ಪ್ರಕರಣವು ಘೋರ ಕೃತ್ಯವಾಗಿದ್ದು ಬೀದರಿನ ಅಫರ್ ಎಸ್.ಪಿ. ಮತ್ತು ಡಿ.ಎಸ್.ಪಿ. ರವರು ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡಿ, ಮೇಲ್ವಿಚಾರಣೆ ನಡೆಸಿದರೂ ನೀವು ಮೇಲ್ಕಂಡ ಘೋರ ಕೃತ್ಯ ನಡೆದ ಸ್ಥಳಕ್ಕೆ ಸದರಿ ದಿನ ಬೆಳಿಗ್ಗೆ 10.00 ಗಂಟೆಯ ವರೆಗೆ ಭೇಟಿ ನೀಡಿಲ್ಲ. ಅಲ್ಲದೇ ಪ್ರಕರಣದ ಮುಂದಿನ ತನಿಖೆ ತೆಗೆದುಕೊಂಡಿರುವುದಿಲ್ಲ. ಈ ವಿಚಾರದಲ್ಲಿ ನಿಮ್ಮನ್ನು ದಿನಾಂಕ: 27.10.95 ಮತ್ತು 29.10.95 ರಂದು ಜ್ಞಾಪನ ಪತ್ರದ ಮುಖಾಂತರ ನಿಮ್ಮ ವಿವರಣೆ ಕೇಳಿದ್ದು ನೀವು ಅವುಗಳಿಗೆ ನಿಮ್ಮ ವಿವರಣೆಯನ್ನು ದಿನಾಂಕ: 28.10.95 ಮತ್ತು 29.10.95 ರಂದು ಸಲ್ಲಿಸಿದ್ದು, ಅವುಗಳಲ್ಲಿ ಬೀದರ್ ಅಪರ ಪೊಲೀಸ್ ಅಧೀಕ್ಷಕರವರಿಗೆ ನಿಮ್ಮ ಕೆಲಸದ ಬಗ್ಗೆ ಪ್ರಶ್ನಿಸಕೂಡದೆಂದು ಪುನಃ ವಿವರಣೆ ಕೇಳಿದ್ದಲ್ಲಿ ಸರಿಯಾದ ಶಿಸ್ತು ಏನೆಂಬುದನ್ನು ತೋರಿಸುವುದಾಗಿ ನೀವು ಮೇಲಿನ ಅಧಿಕಾರಿಗಳಿಗೆ ಬೆದರಿಕೆಯನ್ನು ಒಡ್ಡಿ ದುರ್ನಡತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿದ್ದೀರಿ."

4) ಬೀದರ್ ನಗರದ ನಿಮ್ಮ ಸೇವಾವಧಿಯಲ್ಲಿ ಮಟಕಾ-ಜೂಜಾಟ ನಡೆಯುತ್ತಿದ್ದು, ಅದನ್ನು ತಡೆಗಟ್ಟುವಂತೆ ನಿಮಗೆ ಬೀದರ್ ಎಸ್.ಪಿ.ರವರು ಮೇಲಿಂದ ಮೇಲೆ ಸೂಚನೆಗಳನ್ನು ನೀಡಿದರೂ ಸಹ ನೀವು ಮಟಕಾ-ಜೂಜಾಟ ಕೋರರೊಂದಿಗೆ ಶಾಮೀಲಾಗಿದ್ದು, ಮಟಕಾ-ಜೂಜಾಟ ತಡೆಗಟ್ಟದೇ ಇದ್ದುದನ್ನು ಗಮನಿಸಿ ಬೀದರ್ ಪೊಲೀಸ್ ಅಧೀಕ್ಷಕರು ಕ್ರಮವಾಗಿ ದಿನಾಂಕ: 13.11.95 ಮತ್ತು 14.11.95 ರಂದು ಬೀದರ್ ನಗರದಲ್ಲಿ ಮಟಕಾ-ಜೂಜಾಟದ ಅಡ್ಡೆಗಳ ಮೇಲೆ ಪಿ.ಎಸ್.ಐ. ಬೀದರ್ ನಗರ ಠಾಣೆ ರವರಿಂದ ದಾಳಿ ಮಾಡಿಸಿ ರೂ.3,045-00 ನಗದು ಹಣ, ಮಟಕಾ ಚೀಟಿಗಳನ್ನು ಜಪ್ತಿ ಮಾಡಿದ್ದಲ್ಲದೇ ಆರೋಪಿತರನ್ನು ದಸ್ತಗಿರಿ ಮಾಡಿದ್ದು, ಬೀದರ್ ನಗರ ಠಾಣೆ ಗುನ್ನೆ ನಂ. 119:95 ಹಾಗೂ 121:95, ಕಲಂ 78(3) ಕೆ.ಪಿ. ಆಕ್ಟ್ ಪ್ರಕಾರ ಪ್ರಕರಣ ದಾಖಲಾಯಿಸಿ ತನಿಖೆ ನಡೆಸಿದ್ದು ಇದೆ. ಮೇಲ್ಕಂಡ ವಿಚಾರದಲ್ಲಿ ಮಟಕಾ-ಜೂಜಾಟವನ್ನು ನಿಯಂತ್ರಿಸುವಲ್ಲಿ ನೀವು ನಿರ್ಲಕ್ಷತನ, ದುರ್ನಡತೆ ಹಾಗೂ ಅಶಿಸ್ತನ್ನು ತೋರಿಸಿರುವಿರಿ".

ಮೇಲ್ಕಂಡ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದಿಲ್ಲವೆಂದು ಇಲಾಖಾ ವಿಚಾರಣೆ ಅಧಿಕಾರಿಯ ವರದಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದೆ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 23.10.2002ರ ಆದೇಶದಲ್ಲಿ ಇವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮಾಡಿ, ಎರಡು ವರ್ಷಕಾಲ ಮುಂದೂಡಿ, ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ದಿನಾಂಕ: 19.12.2002 ರಂದು ಮೇಲ್ಮನವಿ ಸಲ್ಲಿಸಿದ್ದು, ಅದನ್ನು ಪರಿಶೀಲಿಸಿದ್ದು ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು ಇವರು ಶಿಸ್ತು ಪ್ರಾಧಿಕಾರಿ ವಿಧಿಸಿರುವ ಶಿಕ್ಷೆಯನ್ನು ರದ್ದುಪಡಿಸಿ ಇವರ ವಿರುದ್ಧದ ವಿಚಾರಣೆಯಲ್ಲಿ ನಿಯಮಾನುಸಾರ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಒಪ್ಪದಿರುವ ಬಗ್ಗೆ ಮುಂದುವರೆದ ಅಭಿಪ್ರಾಯ ವರದಿಯನ್ನು ಕಾರಣ ಕೇಳುವ ಸೂಚನಾ ಪತ್ರದೊಂದಿಗೆ ಆಪಾದಿತರಿಗೆ ನೀಡುವ ಹಂತದಿಂದ ಪುನಃ ವಿಚಾರಣೆ ಮುಂದುವರಿಸಿ, ನಿಯಮಾನುಸಾರ ಕ್ರಮ ತೆಗೆದುಕೊಂಡು ಅಂತಿಮ ಆದೇಶ ಹೊರಡಿಸುವಂತೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 31.03.2003 ರಲ್ಲಿ ಆದೇಶಿಸಿರುತ್ತಾರೆ.

ಮೇಲ್ಮನವಿ ಪ್ರಾಧಿಕಾರದ ಆದೇಶದನ್ವಯ, ಇಲಾಖಾ ವಿಚಾರಣೆ ನಡೆಸಿ, ಕಾರಣ ಕೇಳುವ ಸೂಚನಾ ಪತ್ರ ನೀಡಿ, ಸಮಜಾಯಿಷಿ ಪಡೆದ ಶಿಸ್ತು ಪ್ರಾಧಿಕಾರಿ ಹಾಗೂ ಐ.ಜಿ.ಪಿ. ಈಶಾನ್ಯ ವಲಯ, ಗುಲ್ಬರ್ಗಾ ಇವರು ಆಪಾದಿತರ ವಿರುದ್ಧ ಮಾಡಲಾದ ನಾಲ್ಕು ದೋಷಾರೋಪಣೆಗಳಲ್ಲಿ ಪ್ರಥಮ ದೋಷಾರೋಪಣೆ ಮಾತ್ರ ಸಾಬೀತಾಗಿಲ್ಲವೆಂದು, ಉಳಿದ ಮೂರು ದೋಷಾರೋಪಣೆಗಳು ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುವುದರಿಂದ, ವಿಚಾರಣಾಧಿಕಾರಿಯ ಅಭಿಪ್ರಾಯವನ್ನು ಒಪ್ಪದೆ ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 12.06.2003 ರಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮಾಡಿ ಎರಡು ವರ್ಷಗಳ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧವೂ ಅರ್ಜಿದಾರರು ಮೇಲ್ಮನವಿ ಸಲ್ಲಿಸಿದ್ದು, ಅದನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿನಾಂಕ: 11.03.2004ರ ಆದೇಶದಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿರುತ್ತಾರೆ. ಇಲಾಖಾ ವಿಚಾರಣೆ ದಾಖಲೆಗಳು, ಸಾಕ್ಷಿಗಳ ಹೇಳಿಕೆ, ಕಂಡಿಕಾವಾರು ಷರಾ ಇತ್ಯಾದಿಗಳನ್ನು ಪರಿಶೀಲಿಸಲಾಗಿ ಮೇಲಿನ 2 ರಿಂದ 4 ನೇ ಆರೋಪಗಳು ಸಾಬೀತಾಗಿರುವುದಾಗಿ ಕಂಡು ಬರುತ್ತದೆ. ಮೇಲ್ಮನವಿದಾರರ ವಿವಾದಾಂಶಗಳಲ್ಲಿ ಪರಿಗಣಿಸುವಂತಹ ಸಮರ್ಥನೀಯ ಅಂಶಗಳಾವುವು ಇರುವುದಿಲ್ಲ ಮುಂದುವರೆದು ಮೇಲ್ಮನವಿದಾರರ ವಿರುದ್ಧ ಮಾಡಲಾದ ಆಪಾದನೆಗಳು ಗಂಭೀರ ಸ್ವರೂಪದ್ದಾಗಿದ್ದರೂ ಸಹ ಇನ್ನೂ ಮುಂದೆ ತಮ್ಮ ತಪ್ಪನ್ನು ಸುಧಾರಿಸಿಕೊಳ್ಳಲು ಒಂದು ಅವಕಾಶವನ್ನು ನೀಡಿ, ಉದಾರ ಭಾವನೆ ಕೋರಿ, ಲಘು ದಂಡನೆಯನ್ನು ನೀಡಿರುವ ಕಾರಣದಿಂದ ಶಿಸ್ತು ಪ್ರಾಧಿಕಾರಿಯ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯವಿಲ್ಲವೆಂದು ಪರಿಗಣಿಸಿ ಅರ್ಜಿದಾರರ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 104 ಪೊಸಿಅ 2004, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡೆವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಸಿ.ಎಸ್. ಬೆಣ್ಣೂರು, ಪಿ.ಐ. ಡಕಾಯಿತಿ ಪ್ರತಿಬಂಧಕದಳ, ಸಿ.ಓ.ಡಿ. ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 02.06.2004ರ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 620 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ENERGY SECRETARIAT

**Sub:** Transfer of 3.75 M.W. Wind Power Capacity in favour of M/s. Manipal Health Systems Private Limited-Orders relating to:

**Read:**
1) Government order No: EN 26 NCE 1999 dated: 13.05.1999.
2) Government order No: EN 26 NCE 1999 (part) dated: 06.01.2000.
3) O.M. No. KRED/08/MAHE/2001/1046 dated: 30.08.2001 issued by MD, KREDL, Bangalore.
4) Letter No. KRED/08/MAHE/2005/681 dated: 06.04.2005 received from the MD, KREDL, Bangalore.

**PREAMBLE:**

In the Government Order dated 06.01.2000 read at (2) above, sanction has been accorded for implementation of 10 M.W. capacity Wind Power Project at Jogimatti Wind Zone, Chitradurga, District to M/s. Pioneer Wincon Ltd.

In the Office Memorandum read at (3) above, MD, KREDL has transferred 3.75 MW capacity wind power project to M/s. Manipal Academy of Higher Education, from out of 10 MW capacity allotted to M/s. Pioneer Wincon Ltd.

Now, the Managing Director, Karnataka Renewable Energy Development Limited, Bangalore in his letter dated 06.04.2005 read at (4) above, has recommended to the Government for transfer of 3.75 M.W. Wind Power capacity in favour of M/s. Manipal Health Systems Private Limited, at Pallavanhalli & Kurumardikere village, Hiriyur Taluk, Chitradurga District from out of the sanctioned 3.75 M.W. capacity of M/s Manipal Academy of Higher Education. The proposal has been examined and pass the following order:

**GOVERNMENT ORDER NO. EN 106 NCE 2005 BANGALORE, DATED 15th April 2005**

Government is pleased to accord sanction for transfer of 3.75 M.W. Wind Power capacity in favour of M/s. Manipal Health Systems Private Limited at Pallavanhalli & Kurumardikere village, Hiriyur Taluk, Chitradurga District from M/s Manipal Academy of Higher Education, Manipal.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka.

PR-622

**SURESH .B. KRISHNAPPANAVAR**

Under Secretary to Government, Energy Department.

**Sub:** Transfer of 0.8 M.W. Wind Power Capacity in favour of M/s. Vandana Global Limited-Orders relating to:

**Read:**
1) Government order No: EN 26 NCE 1999 dated: 13.05.1999.
2) Government order No: EN 76 NCE 2005 dated: 18.03.2005.
3) Letter No. KRED/08/VGL/2005/693 dated: 07.04.2005 received from the MD, KREDL, Bangalore.

**PREAMBLE:**

In the Government Order dated: 18.03.2005 read at (2) above, sanction has been accorded for implementation of 192 M.W. capacity Wind Power Project at Jogimatti Village, Chitradurga District to M/s. Enercon India Ltd.

Now, the Managing Director, Karnataka Renewable Energy Development Limited, Bangalore in his letter dated: 07.04.2005 read at (3) above, has recommended to the Government for transfer of 0.8 M.W. Wind Power capacity in favour of M/s Vandana Global Ltd., at Lakkihalli village, Hiriyur Taluk, Chitradurga District from out of the sanctioned 192 M.W. capacity of M/s. Enercon India Ltd.

The proposal has been examined and pass the following order:

**GOVERNMENT ORDER NO. EN 97 NCE 2005 BANGALORE, DATED 11th April 2005**

Government is pleased to accord sanction for transfer of 0.8 M.W. Wind Power capacity in favour of M/s. Vandana Global Limited at Lakkihalli village, Hiriyur Taluk, Chitradurga District from out of the sanctioned 192 M.W. capacity of M/s. Enercon India Ltd. allotted in Government Order DE 76 NCE 2005 dated: 18.03.2005.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka.

PR-623

**SURESH .B. KRISHNAPPANAVAR**

Under Secretary to Government, Energy Department.

**Sub:** Transfer of 1.6 M.W. Wind Power Capacity in favour of M/s. B.V. Finance And Leasing Limited-Orders relating to:

**Read:** 1) Government order No: EN 76 NCE 2005 dated: 18.03.2005

2) Letter No. KRED/08/VGL/2005/692 dated: 07.04.2005 received from the MD, KREDL, Bangalore.

**PREAMBLE:**

In the Government Order dated: 18.03.2005 read at (1) above, sanction has been accorded for implementation of 192 M.W. capacity Wind Power Project at Jogimatti Village, Chitradurga District to M/s. Enercon India Ltd.

Now, the Managing Director, Karnataka Renewable Energy Development Limited, Bangalore in his letter dated: 07.04.2005 read at (2) above, has recommended to the Government for transfer of 1.6 M.W. Wind Power capacity in favour of M/s B.V. Finance And Leasing Ltd., at Lakkihalli village, Hiriyur Taluk, Chitradurga District from out of the sanctioned 192 M.W. capacity of M/s. Enercon India Ltd.

The proposal has been examined and pass the following order:

**GOVERNMENT ORDER NO. EN 96 NCE 2005 BANGALORE, DATED 11th April 2005**

Government is pleased to accord sanction for transfer of 1.6 M.W. Wind Power capacity in favour of M/s. B.V. Finance And Leasing Limited at Lakkihalli village, Hiriyur Taluk, Chitradurga District from out of the sanctioned 192 M.W. capacity of M/s. Enercon India Ltd. allotted in Government Order DE 76 NCE 2005 dated: 18.03.2005.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka.

PR-624

**SURESH .B. KRISHNAPPANAVAR**

Under Secretary to Government, Energy Department.

**ಇಂಧನ ಸಚಿವಾಲಯ**

**ವಿಷಯ:** ಮೆಸರ್ಸ್ ಶ್ರೀ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಸಿರಗುಪ್ಪ ಕಿರು ಜಲ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 4.5 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 29 ಎನ್‌ಸಿಇ 2002, ದಿನಾಂಕ: 13.6.2002.

2. ತಿದ್ದುಪಡಿ ಆದೇಶ ಸಂಖ್ಯೆ: ಇಂಇ 88 ಎನ್‌ಸಿಇ 2005, ದಿನಾಂಕ: 28.3.2005.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಸಿರಗುಪ್ಪ/2005/706, ದಿನಾಂಕ: 07.04.2005.

**ಪ್ರಸ್ತಾವನೆ:**

ಮೆಸರ್ಸ್ ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್ ಈ ಕಂಪನಿಗೆ ಓದಲಾದ (1) ರಲ್ಲಿನ ಆದೇಶದಲ್ಲಿ ಬಳ್ಳಾರಿ ಜಿಲ್ಲೆಯ, ಸಿರಗುಪ್ಪ ಗ್ರಾಮದಲ್ಲಿ ವಿಜಯನಗರ ಅಣೆಕಟ್ಟಿನ ಕೆಳ ತೊರೆಯಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಸಿರಗುಪ್ಪ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2) ರಲ್ಲಿನ ಆದೇಶದಲ್ಲಿ ಕಂಪನಿಯ ಹೆಸರನ್ನು ಎಸ್.ಎಲ್.ಎಸ್. ಪವರ್ ಇಂಡಸ್ಟ್ರೀಸ್ ಲಿಮಿಟೆಡ್, ನಿಂದ ಮೆಸರ್ಸ್ ಶ್ರೀ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಲಾಗಿದೆ.

ಸದರಿ ಸ್ಥಳದಲ್ಲಿ ನೀರಿನ ಹರಿವು ಹಾಗೂ ನೀರಿನ ಎತ್ತರ ಜಾಸ್ತಿ ಇರುವುದರಿಂದ ಹಂಚಿಕೆ ಆಗಿರುವ ಸಾಮರ್ಥ್ಯವನ್ನು 1.5 ಮೆಗಾ ವ್ಯಾಟ್ ನಿಂದ 4.5 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಓದಲಾದ (3)ರ ಪತ್ರದಲ್ಲಿ ಸರ್ಕಾರದ ಅನುಮತಿ ಕೋರಿ ಸೂಕ್ತ ಶಿಫಾರಸ್ಸಿನೊಂದಿಗೆ ಸಲ್ಲಿಸಿರುತ್ತಾರೆ.

ಸದರಿ ವಿಷಯವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 107 ಎನ್‌ಸಿಇ 2005, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2005**

ಮೆಸರ್ಸ್ ಶ್ರೀ ನಿರ್ಮಲ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಓದಲಾದ (1)ರ ಆದೇಶದಲ್ಲಿ ಬಳ್ಳಾರಿ ಜಿಲ್ಲೆಯ, ಸಿರಗುಪ್ಪ ಗ್ರಾಮದಲ್ಲಿ ವಿಜಯನಗರ ಅಣೆಕಟ್ಟಿನ ಕೆಳ ತೊರೆಯಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಸಿರಗುಪ್ಪ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4.5 ಮೆಗಾವ್ಯಾಟ್ ಹೆಚ್ಚಿಸಿ ಅನುಷ್ಠಾನ ಮಾಡಲು ಈ ಕೆಳಗಿನ ಷರತ್ತಿನೊಂದಿಗೆ ಅನುಮತಿ ನೀಡಲಾಗಿದೆ.

1) ಈ ಯೋಜನೆಯಿಂದ ಸ್ಥಳೀಯರಿಗಾಗಲಿ ಸಾರ್ವಜನಿಕ ಸಂಪತ್ತಿಗಾಗಲಿ ಯಾವುದೇ ತೊಂದರೆಯಾಗಕೂಡದು.
2) ಹೊಳೆ ಮಧ್ಯದಲ್ಲಿರುವ ಆಂಜನೆಯ ಸ್ವಾಮಿ ವಿಗ್ರಹವನ್ನು ಸ್ಥಳಾಂತರಿಸುವಲ್ಲಿ ಸ್ಥಳೀಯರ ಮನವೊಲಿಸಿ ಈ ಯೋಜನೆಯನ್ನು ಕೈಗೆತ್ತಿಕೊಳ್ಳಬೇಕು.
3) ಈ ಯೋಜನೆಯ ಕೆಳತೊರೆಯಲ್ಲಿರುವ ರೈತರ ಪಂಪ್‌ಹೌಸ್‌ಗಾಗಲಿ, ಮೇಲ್ತೊರೆಯಲ್ಲಿರುವ ಸಿರಗುಪ್ಪ ಕುಡಿಯುವ ನೀರಿನ ಯೋಜನೆಗೆ ಯಾವುದೇ ತೊಂದರೆಯಾಗಕೂಡದು.
4) ಸ್ಥಳೀಯ ಕ್ಷೇತ್ರದಲ್ಲಿ ಈ ಯೋಜನೆಯಿಂದ ಯಾವುದೇ ಅನಾನುಕೂಲತೆಗಳು ಆಗಕೂಡದು.
5) ಈ ಯೋಜನೆಯ ಡಿ.ಪಿ.ಆರ್.ಗೆ ಮೇಲಿನ ಕುರಿತಾಗಿ ಜಲ ಸಂಪನ್ಮೂಲ ಇಲಾಖೆ ಇಲ್ಲವೇ ಸಂಬಂಧಿತ ಇಲಾಖೆಗಳಿಂದ ಅನುಮೋದನೆ ಪಡೆಯಬೇಕು.
6) ಈ ಯೋಜನೆಯಿಂದ ಸ್ಥಳೀಯ ಜನರ ಸಾಂಪ್ರದಾಯಿಕ ಅಥವಾ ಧಾರ್ಮಿಕ ಅನಿಸಿಕೆಗಳಿಗೆ ಯಾವುದೇ ಧಕ್ಕೆಯಾಗಕೂಡದು.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 625 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಜಸ್ಪರ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 2 ಮೆಗಾ ವ್ಯಾಟ್ ಸಾಮರ್ಥ್ಯದ ಸೊನ್ನಾ ಕಿರು ಜಲ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 10.5 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 157 ಎನ್‌ಸಿಇ 2004, ದಿನಾಂಕ: 09.9.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಸೊನ್ನಾ/2004/1617, ದಿನಾಂಕ: 31.3.2005.

**ಪ್ರಸ್ತಾವನೆ:**

ಮೆಸರ್ಸ್ ಜಸ್ಪರ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಓದಲಾದ (1) ರಲ್ಲಿ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ ಅಫ್‌ಜಲ್‌ಪುರ ತಾಲ್ಲೂಕಿನ ಸೊನ್ನಾ ಗ್ರಾಮದ ಭೀಮಾನದಿಗೆ ಅಡ್ಡಲಾಗಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಸೊನ್ನಾ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಸದರಿ ಸ್ಥಳದಲ್ಲಿ ನೀರಿನ ಹರಿವು 30 ಕ್ಯೂಮೆಕ್ಸ್‌ನಿಂದ 112.42 ಕ್ಯೂಮೆಕ್ಸ್ ಮತ್ತು ನೀರಿನ ಎತ್ತರ 8.5 ಮೀಟರ್‌ನಿಂದ 10.77 ಮೀಟರ್ ಇರುವುದರಿಂದ ಹಂಚಿಕೆಯಾಗಿರುವ ಸಾಮರ್ಥ್ಯವನ್ನು 2 ಮೆಗಾ ವ್ಯಾಟ್‌ನಿಂದ 10.5 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಓದಲಾದ (2)ರ ಪತ್ರದಲ್ಲಿ ಸರ್ಕಾರದ ಅನುಮತಿ ಕೋರಿ ಸೂಕ್ತ ಶಿಫಾರಸ್ಸಿನೊಂದಿಗೆ ಸಲ್ಲಿಸಿರುತ್ತಾರೆ.

ಸದರಿ ವಿಷಯವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 91 ಎನ್‌ಸಿಇ 2005, ಬೆಂಗಳೂರು, ದಿನಾಂಕ: 8ನೇ ಏಪ್ರಿಲ್ 2005**

ಮೆಸರ್ಸ್ ಜಸ್ಪರ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಓದಲಾದ (1)ರ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ, ಅಫ್‌ಜಲ್‌ಪುರ ತಾಲ್ಲೂಕಿನ ಸೊನ್ನಾ ಗ್ರಾಮದ ಭೀಮಾನದಿಗೆ ಅಡ್ಡಲಾಗಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಸೊನ್ನಾ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 10.5 ಮೆಗಾವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಟಾನ ಮಾಡಲು ಜಲ ಸಂಪನ್ಮೂಲ ಇಲಾಖೆಯ ಅನುಮೋದನೆ ಪಡೆಯಬೇಕೆಂಬ ಷರತ್ತಿನೊಂದಿಗೆ ಅನುಮತಿ ನೀಡಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 626 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಗೃಹರಕ್ಷಕರ ಕರ್ತವ್ಯ ಭತ್ಯೆ ಪರಿಷ್ಕರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಒಇ 95 ಕಗೃಸೇ 97, ದಿನಾಂಕ: 18.1.1999.
2) ಮಹಾಸಮಾದೇಷ್ಟರ ಪತ್ರ ಸಂಖ್ಯೆ: ಎಡಿಎಂ (1) 37: ಸಿಜಿಓ:2003-04, ದಿನಾಂಕ: 23.4.2003 ಮತ್ತು 14.2.2005ಕ್ಕೆ ಕೊನೆಗೊಂಡಂತೆ.

**ಪ್ರಸ್ತಾವನೆ:**

ಗೃಹರಕ್ಷಕ ಇಲಾಖೆಯ ಗೃಹರಕ್ಷಕರಿಗೆ ಹಾಲಿ ನೀಡುತ್ತಿರುವ ಕರ್ತವ್ಯ ಭತ್ಯೆಯಾದ ರೂ.35-00 ನ್ನು ರೂ.70-00 ಗಳಿಗೆ ಹೆಚ್ಚಿಸಲು ಮೇಲೆ ಓದಲಾದ (1)ರ ಆದೇಶದಲ್ಲಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ ಓದಲಾದ (2)ರ ಮಹಾಸಮಾದೇಷ್ಟರ ಪತ್ರದಲ್ಲಿ ಇಲಾಖೆಯ ಸ್ವಯಂ ಸೇವಾ ತತ್ವಾದರ್ಶಗಳನ್ನು ಉಳಿಸಿಕೊಂಡು ರಾಜ್ಯದಲ್ಲಿನ ಗೃಹರಕ್ಷಕರ ಹಿತಾಸಕ್ತಿಯನ್ನು ಕಾಪಾಡಿಕೊಂಡು ಹೋಗುವಲ್ಲಿ ಗೃಹರಕ್ಷಕರಿಗೆ ನೀಡಲಾಗುತ್ತಿರುವ ಕರ್ತವ್ಯ : ತರಬೇತಿ ಭತ್ಯೆಯನ್ನು ಪರಿಷ್ಕರಿಸುವುದು ಅತ್ಯಾವಶ್ಯಕವಾಗಿರುವುದಾಗಿ ತಿಳಿಸಿ ಚುನಾವಣೆಗಳು, ಮುಷ್ಕರ ಮತೀಯ ಗಲಭೆ ಜಾತ್ರೆ ಗಣ್ಯರ ಭೇಟಿ ಸಾರ್ವತ್ರಿಕ ಪರೀಕ್ಷೆಗಳು ಇವೇ ಮೊದಲಾದ ಸಂದರ್ಭಗಳಲ್ಲಿ ಕಾನೂನು ಮತ್ತು ಶಿಸ್ತುಪಾಲನೆ ಕಾರ್ಯದಲ್ಲಿ ಪೊಲೀಸರಿಗೆ ನೆರವು ನೀಡಲು ಗೃಹ ರಕ್ಷಕ ಸ್ವಯಂ ಸೇವಕರ ಸೇವೆಯನ್ನು

ಬಳಸಿಕೊಳ್ಳಲಾಗುತ್ತಿದೆ. ಇಂತಹ ಸಂದರ್ಭಗಳಲ್ಲಿ ಗೃಹರಕ್ಷಕರನ್ನು ಪೊಲೀಸರಿಗೆ ಭುಜಕ್ಕೆ ಭುಜ ಕೊಟ್ಟು ಅವರಿಗೆ ಸರಿಸಮಾನವಾಗಿ ಕರ್ತವ್ಯಗಳನ್ನು ನಿರ್ವಹಿಸುತ್ತಾ ಬಂದಿದ್ದಾರೆ. ನೆರೆಹಾವಳಿ, ಅಗ್ನಿ ಅನಾಹುತ ಕಟ್ಟಡಗಳ ಕುಸಿತ ಭೂಕಂಪ ಮೊದಲಾದ ಪ್ರಕೃತಿಕ ಹಾಗೂ ಮಾನವ ನಿರ್ಮಿತ ಗಂಡಾಂತರಗಳಲ್ಲಿ ಗೃಹರಕ್ಷಕರ ಸೇವೆಯನ್ನು ರಕ್ಷಣೆ ಹಾಗೂ ಪುನರ್ ವಸತೀಕರಣ ಕಾರ್ಯಗಳಲ್ಲಿ ಬಳಸಿಕೊಳ್ಳಲಾಗುತ್ತಿದೆ. ಜೀವನೋಪಾಯದ ದಾರಿಯಲ್ಲಿ ತಮ್ಮದೇ ಆದ ಸಣ್ಣಪುಟ್ಟ ಉದ್ಯೋಗ : ವೃತ್ತಿಗಳನ್ನು ಹೊಂದಿರುವ ಗೃಹ ರಕ್ಷಕರು ಕರ್ತವ್ಯದ ಕರೆ ಬಂದಾಗಲೆಲ್ಲಾ ಅದಕ್ಕೆ ಸ್ಪಂದಿಸಿ ತಮ್ಮ ಉದ್ಯೋಗಗಳನ್ನು ಬದಿಗಿಟ್ಟು ದೇಶ ಸೇವೆಯನ್ನು ಗುರಿಯಾಗಿಟ್ಟುಕೊಂಡು ಗೃಹರಕ್ಷಕ ಕರ್ತವ್ಯಗಳನ್ನು ನಿರ್ವಹಿಸುತ್ತಾ ಬಂದಿರುತ್ತಾರೆ. ಸಾಮಾನ್ಯವಾಗಿ ಗೃಹರಕ್ಷಕರ ಸದಸ್ಯರ ಪೈಕಿ ಬಹು ಮಂದಿ ನಿರುದ್ಯೋಗಿಗಳಾಗಿರುತ್ತಾರೆ. ಗೃಹರಕ್ಷಕರ ಸೇವೆಯನ್ನು ಅಗತ್ಯದ ಸಂದರ್ಭಗಳಲ್ಲಿ ಮಾತ್ರ ಬಂದೋಬಸ್ತು ಕರ್ತವ್ಯಗಳಿಗೆ ಉಪಯೋಗಿಸಿಕೊಳ್ಳಲಾಗುತ್ತಿದೆ. ವರ್ಷದ 365 ದಿನಗಳಲ್ಲಿ ಕರ್ತವ್ಯ ನಿಯೋಜನೆ ಇರುವುದಿಲ್ಲ.

ಗೃಹರಕ್ಷಕರನ್ನು ಕರ್ತವ್ಯಗಳಿಗೆ ನಿಯೋಜಿಸಿದಾಗ ದೈನಂದಿನ ವೆಚ್ಚವನ್ನು ಭರಿಸುವ ಸಲುವಾಗಿ ಹಾಗೂ ಅವರಿಗೆ ಹಾಗೂ ಅವರ ಕುಟುಂಬಗಳಿಗೆ ಯಾವುದೇ ಹೆಚ್ಚಿನ ಹೊರೆ ತಗಲದಂತೆ ನೋಡಿಕೊಳ್ಳುವ ದಿಸೆಯಲ್ಲಿ ಗೃಹರಕ್ಷಕರಿಗೆ ಕರ್ತವ್ಯ ಭತ್ಯೆಯನ್ನು ನೀಡಲಾಗುತ್ತಿದೆ. ಈ ದರವನ್ನು ಜನವರಿ 1999 ರಲ್ಲಿ ನಿಗದಿಪಡಿಸಲಾಗಿದ್ದು 5 ವರ್ಷಗಳಿಗೂ ಹೆಚ್ಚಿನ ಅವಧಿ ಸಂದಿದ್ದು ಪ್ರಚಲಿತ ಬೆಲೆ ಸೂಚ್ಯಂಕದ ಮೇರೆಗೆ ಕರ್ತವ್ಯ ಭತ್ಯೆ ಪರಿಷ್ಕರಣೆ ಅತ್ಯಾವಶ್ಯಕವಾಗಿರುತ್ತದೆ. ಕರ್ತವ್ಯ ದರ ಹೆಚ್ಚಿಸುವ ಪ್ರಸ್ತಾವನೆಯನ್ನು ಕಳೆದ 5 ವರ್ಷಗಳಿಂದಲೂ ತೆಗೆದುಕೊಳ್ಳದೇ ಇರುವುದರಿಂದ ಗೃಹ ರಕ್ಷಕ ಸದಸ್ಯರಲ್ಲಿ ಹೆಚ್ಚಿನ ನಿರುತ್ಸಾಹ ಮೂಡಿದ್ದು ಪೊಲೀಸ್ ಇಲಾಖೆಯ ಬೇಡಿಕೆಗೆ ಅನುಗುಣವಾಗಿ ಗೃಹರಕ್ಷಕರ ನಿಯೋಜನೆಯಲ್ಲಿ ಗಂಭೀರ ಪರಿಣಾಮ ಉಂಟಾಗುತ್ತಿದೆ. ಈ ಸ್ವಯಂ ಸೇವಕ ಸಂಸ್ಥೆಗೆ ಹೆಚ್ಚು ಹೆಚ್ಚು ನಾಗರೀಕರನ್ನು ಆಕರ್ಷಿಸಲು ಹಾಗೂ ಸಂಸ್ಥೆಯ ಕಾರ್ಯ ಚಟುವಟಿಕೆಗಳನ್ನು ಸಕ್ರಿಯವಾಗಿಡಲು ಕರ್ತವ್ಯ ಭತ್ಯೆಯ ದರ ಪರಿಷ್ಕರಣೆಯು ಪ್ರಸ್ತುತ ಸಂದರ್ಭದಲ್ಲಿ ಅನಿವಾರ್ಯವಾಗಿರುತ್ತದೆ. ಇತ್ತೀಚೆಗೆ ರಾಜ್ಯ ಸರ್ಕಾರವು ರಾಜ್ಯದಲ್ಲಿನ ಗೃಹರಕ್ಷಕರ ಸಂಖ್ಯಾಬಲವನ್ನು 18700 ರಿಂದ 25,000ಕ್ಕೆ ಹೆಚ್ಚಿಸಿರುತ್ತದೆ. ಹೆಚ್ಚುವರಿಯಾಗಿ ನೀಡಲಾಗಿರುವ ಗೃಹರಕ್ಷಕರ ಸಂಖ್ಯಾಬಲವನ್ನು ಭರ್ತಿ ಮಾಡಿಕೊಳ್ಳುವ ದಿಸೆಯಲ್ಲಿ ಕರ್ತವ್ಯ ಭತ್ಯೆ ಪರಿಷ್ಕರಣೆ ಒಂದು ಪ್ರೋತ್ಸಾಹದಾಯಕ ಮಾರ್ಗವಾಗಿರುತ್ತದೆ. ಕೆಲವು ರಾಜ್ಯಗಳಲ್ಲಿ ಗೃಹ ರಕ್ಷಕರಿಗೆ ದಿನವೊಂದಕ್ಕೆ ರೂ.100ಕ್ಕೂ ಮೇಲ್ಪಟ್ಟು ಕರ್ತವ್ಯ ಭತ್ಯೆಯನ್ನು ನೀಡಲಾಗುತ್ತಿದೆ. ಅಲ್ಲದೆ ರಾಜ್ಯದ ವಿಧಾನ ಮಂಡಲದ ವಿಷಯ ಸಮಿತಿಯು ತನ್ನ 2002-2003ನೇ ಸಾಲಿನ ವರದಿಯಲ್ಲಿ ಗೃಹರಕ್ಷಕರ ಕರ್ತವ್ಯ ಭತ್ಯೆ ದರವನ್ನು ರೂ.110-00ಕ್ಕೆ ಹೆಚ್ಚಿಸುವಂತೆ ಶಿಫಾರಸ್ಸು ಮಾಡಿರುತ್ತದೆ. ಈ ಪರಿಷ್ಕರಣೆಯಿಂದಾಗಿ ಸರ್ಕಾರದ ಬೊಕ್ಕಸಕ್ಕೆ ಹೆಚ್ಚಿನ ಆರ್ಥಿಕ ಹೊರೆ ಬೀಳುವುದಿಲ್ಲ.

ಮೇಲೆ ವಿವರಿಸಲಾಗಿರುವ ವಾಸ್ತವಾಂಶಗಳನ್ನು ಪರಿಗಣಿಸಿ ತಮ್ಮ ಸ್ವಂತ ಕೆಲಸ ಕಾರ್ಯಗಳನ್ನು ಬದಿಗಿಟ್ಟು ಸಮಾಜದ ಒಳಿತಿಗಾಗಿ ದುಡಿಯುತ್ತಿರುವ ಗೃಹರಕ್ಷಕರ ಹಿತಾಸಕ್ತಿಯಿಂದ ಅವರಿಗೆ ನೀಡಲಾಗಿರುವ ಕರ್ತವ್ಯ ಭತ್ಯೆ ಪರಿಷ್ಕರಣೆ ಆದ್ಯತೆ ಮೇಲೆ ಆಗಬೇಕಾಗಿದ್ದು ಕರ್ತವ್ಯ ಭತ್ಯೆ ದರವನ್ನು ರೂ.70 ರಿಂದ ರೂ.110ಕ್ಕೆ ಹೆಚ್ಚಿಸಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 31 ಕಗೃಸೇ 2003, ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗೃಹ ರಕ್ಷಕ ಇಲಾಖೆಯ ಗೃಹ ರಕ್ಷಕರಿಗೆ ಕರ್ತವ್ಯ ಭತ್ಯೆಯನ್ನು ದಿನಾಂಕ: 1.4.2005 ರಿಂದ ಅನ್ವಯವಾಗುವಂತೆ ರೂ.70-00 ರಿಂದ ರೂ.90-00 ಕ್ಕೆ ಹೆಚ್ಚಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ವೆಚ್ಚವನ್ನು ಶೇ.25 ರಷ್ಟನ್ನು ಕೇಂದ್ರ ಸರ್ಕಾರದಿಂದ ಮರುಪಾವತಿಸಿಕೊಳ್ಳತಕ್ಕದ್ದು. ಸದರಿ ವೆಚ್ಚವನ್ನು 2005-2006ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2070-00-107-0-01 ಗೃಹ ರಕ್ಷಕದಳ ನಿರ್ದೇಶನಾಲಯ 015 ಪೂರಕ ವೆಚ್ಚಗಳ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 488 ವೆಚ್ಚ-6:2005, ದಿನಾಂಕ: 23.3.2005 ರಲ್ಲಿ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 627 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 113 ಎಸ್ಇಎನ್ 2003, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2005**

ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ಬಡ್ತಿ ವಿಷಯದಲ್ಲಿ ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು) ಇವರಿಗೆ ಹಣದ ಆಮಿಷವನ್ನು ತೋರಿಸಲು ಪ್ರಯತ್ನಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3ನ್ನು ಉಲ್ಲಂಘಿಸಿ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ಬಿ. ವೆಂಕಟರೆಡ್ಡಿರವರ ವಿರುದ್ಧ ಮೇಲೆ ಹೇಳಿದ ದುರ್ನಡತೆ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 650 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಎಂ. ಪ್ರಭಾಗರನ್, ನಿವೃತ್ತ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಹೆಚ್. ರಾಮಚಂದ್ರ, ಹಿರಿಯ ಸಹಾಯಕ ಇವರುಗಳ ವಿರುದ್ಧ ಶಿಸ್ತಿನ ಕ್ರಮ ಕುರಿತು.

**ಓದಲಾಗಿದೆ:** 1) ಕಂದಾಯ ಇಲಾಖೆಯ ಕಡತ ಸಂಖ್ಯೆ: ಕಂಇ 71 ಭೂಸ್ವಾಗು 2004.

2) ಸರ್ಕಾರದ ನೋಟೀಸ್ ಸಂಖ್ಯೆ: ಸಿಆಸುಇ 113 ಎಸ್ಇಎನ್ 2004, ದಿನಾಂಕ: 31.7.2004.

3) ಕಂದಾಯ ಇಲಾಖೆಯ ಅ.ಟಿ. ಸಂಖ್ಯೆ: ಕಂಇ 72 ಭೂಸ್ವಾಗು 2004, ದಿನಾಂಕ: 18.12.2004 ಮತ್ತು 11.3.2005.

**ಪ್ರಸ್ತಾವನೆ:**

ಗುಲ್ಬರ್ಗಾ ತಾಲ್ಲೂಕಿನ ಸಾರಡಗಿ ಗ್ರಾಮದ ಸರ್ವೆ ನಂ.51/2, 53/2 ರಲ್ಲಿ 3.52 ಎಕರೆ ಜಮೀನನ್ನು ಬೀದರ್-ಶ್ರೀರಂಗಪಟ್ಟಣ ರಸ್ತೆ ನಿರ್ಮಾಣಕ್ಕಾಗಿ ಭೂಸ್ವಾಧೀನ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ಅಕ್ರಮ ನಡೆಸಿದರೆನ್ನಲಾದ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರ ವಿರುದ್ಧ ಗುಲ್ಬರ್ಗ ವಿಭಾಗಾಧಿಕಾರಿಗಳು ಸದರಿಯವರ ವಿರುದ್ಧ ಕ್ರಮ ಜರುಗಿಸಲು ಶಿಫಾರಸ್ಸು ಮಾಡಿದ ಪ್ರಸ್ತಾವನೆಯನ್ನು ವಿಳಂಬ ಮಾಡಿದ್ದಾರೆನ್ನಲಾದ ಆರೋಪಕ್ಕಾಗಿ ಶ್ರೀ ಎಂ. ಪ್ರಭಾಗರನ್, ಅಂದಿನ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಹೆಚ್. ರಾಮಚಂದ್ರ ಹಿರಿಯ ಸಹಾಯಕ ಇವರುಗಳ ವಿರುದ್ಧ ಶಿಸ್ತಿನ ಕ್ರಮ ತೆಗೆದುಕೊಳ್ಳಲು ಮೇಲೆ ಉಲ್ಲೇಖ (1) ರಲ್ಲಿ ಓದಲಾದ ಕಂದಾಯ ಇಲಾಖೆಯ ಕಡತದಲ್ಲಿ ಶಿಫಾರಸ್ಸು ಮಾಡಲಾಗಿತ್ತು.

ಅದರಂತೆ ಉಲ್ಲೇಖ (2) ರಲ್ಲಿ ಓದಲಾದ ಸರ್ಕಾರದ ನೋಟೀಸ್‌ನ ಮೂಲಕ ದೋಷಾರೋಪಣೆಗಳನ್ನು ಸದರಿಯವರಿಗೆ ಜಾರಿ ಮಾಡಲಾಗಿದೆ. ಈ ನೋಟೀಸಿಗೆ ಆಪಾದಿತ ಅಧಿಕಾರಿ/ ನೌಕರರು ಉತ್ತರಿಸುತ್ತ ಅವರಿಂದ ಯಾವುದೇ ಅಪರಾಧ ಜರುಗಿಲ್ಲವೆಂದು ಆರೋಪಗಳನ್ನು ನಿರಾಕರಿಸುತ್ತಾರೆ. ಇವರುಗಳ ಈ ಸಮಜಾಯಿಷಿಯನ್ನು ಆಡಳಿತ ಇಲಾಖೆಯ ಅಭಿಪ್ರಾಯಕ್ಕೆ ಕಳುಹಿಸಲಾಗಿತ್ತು. ಈ ಸಮಜಾಯಿಷಿಗಳನ್ನು ಪರಿಶೀಲಿಸಿದ ಆಡಳಿತ ಇಲಾಖೆಯು ಈ ಕೆಳಕಂಡಂತೆ ಮೇಲೆ ಉಲ್ಲೇಖ (3) ರಲ್ಲಿ ಓದಲಾದ ಅ.ಟಿ.ಯಲ್ಲಿ ತಿಳಿಸಿರುತ್ತದೆ.

ಈ ಪ್ರಕರಣಗಳಲ್ಲಿ ಎರಡು ಕಡತಗಳಿದ್ದು, ಎರಡು ಕಡತಗಳು ಒಂದಲ್ಲ ಒಂದು ರೀತಿಯಲ್ಲಿ ಚಲನೆಯಲ್ಲಿರುವುದು ಕಂಡು ಬರುತ್ತದೆ. ವಿಷಯ ನಿರ್ವಾಹಕರಾದ ಶ್ರೀ ರಾಮಚಂದ್ರರವರಿಗೆ ಅಧೀನ ಕಾರ್ಯದರ್ಶಿಗಳಾಗಲಿ ಅಥವಾ ಶಾಖಾಧಿಕಾರಿಗಳಾಗಲಿ ಗುರುತು ಮಾಡಿರುವುದಿಲ್ಲ. ಈ ಪ್ರಕರಣದಲ್ಲಿ ಸ್ವೀಕೃತಿ ಬಂದಾಗ ಪರಿಶೀಲಿಸಿ ಮಂಡಿಸಿರುವಾಗ ಸದರಿ ಕಡತದೊಂದಿಗೆ ಮತ್ತೊಂದು ಕಡತವನ್ನು ಅದರ ಅಡಿಯಲ್ಲಿಟ್ಟು ಮಂಡಿಸಿರುವುದು ಕಂಡುಬರುತ್ತದೆ. ಹೀಗಾಗಿ ಎರಡೂ ಕಡತಗಳನ್ನು ಒಟ್ಟಿಗೆ ಅಧ್ಯಯನ ಮಾಡಿದಾಗ ವಿಳಂಬವಾಗಿಲ್ಲವೆಂದು ನಿರ್ಣಯಕ್ಕೆ ಬರಲಾಗಿದೆ. ಹಿಂದಿನ ಉಪ ಕಾರ್ಯದರ್ಶಿಗಳಾದ ಶ್ರೀ ಅಭಯಕುಮಾರ್ ಮತ್ತು ಅಧೀನ ಕಾರ್ಯದರ್ಶಿಯಾದ ಎಂ. ಪ್ರಭಾಕರನ್ ರವರು ನಿವೃತ್ತಿ ಹೊಂದಿರುತ್ತಾರೆ ಹಾಗೂ ಪ್ರಶ್ನಿತ ಎರಡೂ ಕಡತಗಳಲ್ಲಿ ಅಗತ್ಯ ಕ್ರಮ ಕೈಗೊಂಡಿರುವುದರಿಂದ ಮತ್ತು ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗಿಲ್ಲದಿರುವುದರಿಂದ ಇವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸುವಂತೆ ಕೋರಿದೆ.

ಮೇಲ್ಕಂಡ ಕಂದಾಯ ಇಲಾಖೆಯ ಅಭಿಪ್ರಾಯವನ್ನು ಪರಿಶೀಲಿಸಲಾಗಿ ಸಾರಡಗಿ ಗ್ರಾಮದ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ನಡೆದ ಅವ್ಯವಹಾರಗಳ ಕುರಿತು ಈಗಾಗಲೇ ಕ್ರಮ ಕೈಗೊಂಡಿರುವುದನ್ನು ಹಾಗೂ ಈ ಪ್ರಕರಣದಲ್ಲಿನ ಆರೋಪಗಳು ಸಾಮಾನ್ಯ ಸ್ವರೂಪದ್ದಾಗಿರುವುದನ್ನು ಮನಗಂಡು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 113 ಎಸ್ಇಎನ್ 2004, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಎಂ. ಪ್ರಭಾಗರನ್, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಹೆಚ್. ರಾಮಚಂದ್ರ, ಹಿರಿಯ ಸಹಾಯಕ ಇವರುಗಳಿಗೆ ಎಚ್ಚರಿಕೆಯನ್ನು ನೀಡಿ ಅವರ ವಿರುದ್ಧದ ಶಿಸ್ತು ಪ್ರಕರಣವನ್ನು ಕೈಬಿಡಲು ಸರ್ಕಾರವು ಆದೇಶಿಸುತ್ತದೆ.

ಈ ಶಿಸ್ತಿನ ಕ್ರಮವು ಪ್ರಾರಂಭವಾಗದಿದ್ದಲ್ಲಿ ಸದರಿಯವರು ಯಾವ ಸೌಲಭ್ಯಗಳಿಗೆ ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳಿಗೆ ಅರ್ಹರಾಗುತ್ತಾರೆಂದು ಸರ್ಕಾರವು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 651 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

**ವಿಷಯ:** ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿನ ಕಾರ್ಯದರ್ಶಿಗಳ ಹುದ್ದೆಗಳನ್ನು ಪುನರ್ ಪದನಾಮೀಕರಿಸುವ ಕುರಿತು.

**ಓದಲಾಗಿದೆ:** ಸರ್ಕಾರದ ಅಧೀನ ಕಾರ್ಯದರ್ಶಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1) ಇವರ ದಿನಾಂಕ: 15.3.2005ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 62 ಸಅಸೆ 2005.

**ಪ್ರಸ್ತಾವನೆ:**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 672 ಸೇಅಸೆ 2004, ದಿನಾಂಕ: 1.1.2005 ರಲ್ಲಿ ಶ್ರೀ ಜಾವೇದ್ ಅಖ್ತರ್, ಐ.ಎ.ಎಸ್. ರವರನ್ನು ಮುಖ್ಯ ಮಂತ್ರಿಯವರ ಕಾರ್ಯದರ್ಶಿಯಾಗಿ ನೇಮಕ ಮಾಡಲಾಗಿದೆ. ಹಾಗೂ ಈಗಾಗಲೇ ಶ್ರೀ ಸಿದ್ದಯ್ಯ, ಐ.ಎ.ಎಸ್. ರವರು ಮುಖ್ಯ ಮಂತ್ರಿಯವರ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದು, ಪ್ರಸ್ತುತ ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ಇಬ್ಬರು ಕಾರ್ಯದರ್ಶಿಗಳ ಮಟ್ಟದ ಅಧಿಕಾರಿಗಳು ಕಾರ್ಯನಿರ್ವಹಣೆ ಮಾಡುತ್ತಿರುವುದರಿಂದ ಆಡಳಿತಾತ್ಮಕವಾಗಿ ಕಡತಗಳನ್ನು ಸಲ್ಲಿಸುವಾಗ ಉಂಟಾಗುವ ಸಂದಿಗ್ಧತೆಯನ್ನು ನಿವಾರಿಸಲು ಅವರುಗಳು ಹೊಂದಿರುವ ಕಾರ್ಯದರ್ಶಿ ಹುದ್ದೆಗಳನ್ನು ಕಾರ್ಯದರ್ಶಿ-1 ಮತ್ತು ಕಾರ್ಯದರ್ಶಿ-2 ಎಂದು ಮುಂದಿನ ಆದೇಶದವರೆಗೆ ಪುನರ್ ಪದನಾಮೀಕರಿಸಲು ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಸಸಿವಿ 2005, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2005**

ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಶ್ರೀ ಸಿದ್ದಯ್ಯ, ಐ.ಎ.ಎಸ್. ರವರು ಹೊಂದಿರುವ ಕಾರ್ಯದರ್ಶಿ ಹುದ್ದೆಯನ್ನು ಮುಖ್ಯ ಮಂತ್ರಿಯವರ ಕಾರ್ಯದರ್ಶಿ-1 ಎಂದು ಹಾಗೂ ಶ್ರೀ ಜಾವೇದ್ ಅಖ್ತರ್, ಐ.ಎ.ಎಸ್. ರವರು ಹೊಂದಿರುವ ಕಾರ್ಯದರ್ಶಿ ಹುದ್ದೆಯನ್ನು ಮುಖ್ಯ ಮಂತ್ರಿಯವರ ಕಾರ್ಯದರ್ಶಿ-2 ಎಂದು ಮುಂದಿನ ಆದೇಶದವರೆಗೆ ಪುನರ್ ಪದನಾಮೀಕರಿಸಿದೆ.

ಎರಡು ಕಾರ್ಯದರ್ಶಿಗಳ ಪೈಕಿ ಸೇವೆಯಲ್ಲಿ ಹಿರಿಯರಾದವರು ಹೊಂದಿರುವ ಮುಖ್ಯ ಮಂತ್ರಿಯವರ ಕಾರ್ಯದರ್ಶಿ ಹುದ್ದೆಯನ್ನು ಕಾರ್ಯದರ್ಶಿ-1 ಎಂದು ಸೇವೆಯಲ್ಲಿ ಕಿರಿಯರು ಹೊಂದಿರುವ ಹುದ್ದೆಯನ್ನು ಕಾರ್ಯದರ್ಶಿ-2 ಎಂಬುದಾಗಿ ಮುಂದೆ ಸಂದರ್ಭಾನುಸಾರ ಪರಿಗಣಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 10.7.1996ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 652 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

## PERSONNEL AND ADMINISTRATIVE REFORMS SECRETARIAT

**Subject:** Deputation of Officers of Karnataka Government Secretariat to participate in the training on various Training Programmes being conducted by Centre for Public Policy in collaboration with Indian Institute of Management Bangalore.

**Read:** U.O.Note No. DPAR 33 Ebhatha 2005, dated: 28.3.2005 and 19.4.2005.

**PREAMBLE:**

The Department of Personnel Administration and Reforms (A.R.) in its U.O.Notes read above has nominated the Officers of Karnataka Government Secretariat to the various trainings programmes on the dates indicated against their names.

Hence the following order.

**GOVERNMENT ORDER No. DPAR 119 SGO 2005, Bangalore, Dated: 2nd May 2005**

Sanction is accorded for the deputation of the following Officers of Karnataka Government Secretariat to participate in the Training Programmes on the dates indicated against their names as nominated by Department of Personnel Administration and Reforms (A.R.).

| Sl.No. | Title of the Programme | Duration | Officer deputed **Sri/Smt** |
|---|---|---|---|
| 1 | Negotiating & Managing Commercial Contracts | 23 to 27 May 2005 | Roop Narayan, Deputy Secretary, Finance Department. |
| 2 | Organisational Growth & Strategic HRM | 9 to 11 June 2005 | Sudhakar Shetty, Under Secretary DPAR |
| 3 | Organisational Growth & Strategic HRM | 9 to 11 June 2005 | Ahmed A. Mokhtadar, Deputy Secretary, DPAR (Admn.) |
| 4 | Customer Delight & Marketing Realities | 10 & 11 June 2005 | Sathyanarayana Rao, Deputy Secretary, Urban Development Department. |
| 5 | Marketing & Branding-A Three pronged Approach | 17 & 18 June 2005 | Kariyappa, Deputy Secretary, Commerce & Industries Department. |
| 6 | Practical Management of Indirect Taxation | 18 to 22 July 2005 | N.T. Naik, Deputy Secretary, Finance Department. |
| 7 | Developing Leadership Pipeline | 29 Sept to 1 Oct 2005 | Venkateshaiah, Director, KGSTI |
| 8 | Creativity Reinvention and Self Enhancement for practicing Managers | 3 to 7 Oct 2005 | Raghupathy, Joint Secretary, DPAR (AR) |
| 9 | Management of Electric Utilities (Residential Programme) | 12 to 14 Dec 2005 | M. Lokaraj, Deputy Secretary, Energy Department. |
| 10 | Infrastructure Financing and Public Private Partnership (Residential Programme) | 6 to 8 Feb 2006 | Vijayakumar P. Revadi, Addl. Secretary Infrastructure Development Department. |

By Order and in the name of the Governor of Karnataka,

**U.P. PRABHU**

P.R. 653 Under Secretary to Government,

Department of Personnel and Administrative Reforms (Services-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ತಿದ್ದೋಲೆ ಸಂಖ್ಯೆ: ಸಿಆಸುಇ 257 ಸಅಸೇ 2004, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2005**

ದಿನಾಂಕ: 5.2.2005ರ ಸಮ ಸಂಖ್ಯೆಯ ತಿದ್ದೋಲೆಯ 8ನೇ ಸಾಲಿನಲ್ಲಿರುವ "ದಿನಾಂಕ: 28.9.2004 ರಿಂದ ಪೂರ್ವಾನ್ವಯವಾಗಿ" ಪದಗಳ ಬದಲಾಗಿ "ದಿನಾಂಕ: 1.8.2004 ರಿಂದ ಪೂರ್ವಾನ್ವಯವಾಗಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 654

**ತಿದ್ದೋಲೆ ಸಂಖ್ಯೆ: ಸಿಆಸುಇ 257 ಸಅಸೇ 2004 (ಭಾಗ), ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2005**

ಡಾ: ಆರ್. ನರಸಿಂಹಮೂರ್ತಿ, ಕನ್ನಡ ಆಯ್ಕೆ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರನ್ನು ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತ ಶಾಖೆಯಲ್ಲಿನ ನೇಮಕಾತಿಗೆ ಸಂಬಂಧಿಸಿದಂತೆ ದಿನಾಂಕ: 5.2.2005 ರಂದು ಹೊರಡಿಸಲಾದ ಸಮ ಸಂಖ್ಯೆಯ ತಿದ್ದೋಲೆಯ (ಭಾಗ) 5ನೇ ಸಾಲಿನಲ್ಲಿರುವ "ದಿನಾಂಕ: 28.9.2004 ರಿಂದ ಪೂರ್ವಾನ್ವಯವಾಗಿ" ಪದಗಳ ಬದಲಾಗಿ "ದಿನಾಂಕ: 1.8.2004 ರಿಂದ ಪೂರ್ವಾನ್ವಯವಾಗಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 655

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಗೋಪಿನಾಥ್, ಮಾಜಿ ಎಪಿಸಿ 83, ಸಿಎಆರ್ (ಕೇಂದ್ರ) ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಿಎಆರ್ (ಕೇಂದ್ರ) ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ/17/01-02/ಓಬಿ ಸಂಖ್ಯೆ: 39/2002-03, ದಿನಾಂಕ: 04.04.2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, (ಆಡಳಿತ ಮತ್ತು ಸಿಎಆರ್) ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/24/2003, ದಿನಾಂಕ: 19.08.2003.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19.09.2003.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/73/2003-04, ದಿನಾಂಕ: 24.02.2004.

**ಪ್ರಸ್ತಾವನೆ:**

ಶ್ರೀ ಗೋಪಿನಾಥ್, ಮಾಜಿ ಪಿಸಿ 83, ಸಿಎಆರ್ (ಕೇಂದ್ರ) ಬೆಂಗಳೂರು, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

"ಎಪಿಸಿ. 83, ಗೋಪಿನಾಥ್, "ಬಿ" ವಿಭಾಗ, ಸಿಎಆರ್ (ಕೇಂದ್ರ), ಬೆಂಗಳೂರು, ಆದ ನೀವು ದಿನಾಂಕ: 09.05.2000 ರಿಂದ 04.06.2001 ರವರೆಗೆ ಒಟ್ಟು 27 ದಿನಗಳು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗಿದ್ದು, ಈ ಹಿಂದೆ 10 ಬಾರಿ ಕರ್ತವ್ಯಕ್ಕೆ ಗೈರುಹಾಜರಿಯಾಗಿ ಶಿಕ್ಷೆಯಾಗಿದ್ದರೂ ಸಹ ಸುಧಾರಿಸಿರುವುದಿಲ್ಲ. ಇದು ನೀವು ನಿಮ್ಮ ಕರ್ತವ್ಯದಲ್ಲಿ ತೋರಿಸಿರುವ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನವನ್ನು ತೋರಿಸುವ ಬಗ್ಗೆ."

ಮೇಲ್ಕಂಡ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದೆಯೆಂಬ ಇಲಾಖಾ ವಿಚಾರಣೆ ವರದಿಯ ಆಧಾರದ ಮೇಲೆ, ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಿಎಆರ್ (ಕೇಂದ್ರ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 04.04.2003ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಸತ್ಯಾಂಶವಿಲ್ಲವೆಂದು ಪರಿಗಣಿಸಿ, ಶಿಸ್ತು ಪ್ರಾಧಿಕಾರದ ಆದೇಶವನ್ನು ಎತ್ತಿಹಿಡಿದು, ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, (ಆಡಳಿತ ಮತ್ತು ಸಿಎಆರ್) ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 19.08.2003ರ ಆದೇಶದಲ್ಲಿ ಅರ್ಜಿದಾರರ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿ ಇಲಾಖೆ ವಿಚಾರಣೆ ದಾಖಲೆಗಳನ್ನು ಹಾಗೂ ಅರ್ಜಿದಾರರ ಸೇವಾ ಪುಸ್ತಕವನ್ನು ಪರಿಶೀಲಿಸಲಾಯಿತು. ನೌಕರರು ದಿನಾಂಕ: 09.05.2001 ರಿಂದ 04.06.2001 ರವರೆಗೆ ಒಟ್ಟು 27 ದಿನಗಳು ಕರ್ತವ್ಯಕ್ಕೆ ಗೈರುಹಾಜರಾಗಿದ್ದು, ಇದಲ್ಲದೆ, ಈ ಹಿಂದೆ 10 ಬಾರಿ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿರುವುದು ಕಂಡು ಬಂದಿದೆ. ನೌಕರರ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಬಲವಾದ ಕಾರಣವಿಲ್ಲವೆಂದು ಮನಗಂಡು, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 250 ಪೊಸಿಅ 2004, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗೋಪಿನಾಥ್, ಮಾಜಿ ಎಪಿಸಿ 83, ಸಿಎಆರ್, (ಕೇಂದ್ರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 656 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಎಲ್.ಜಿ. ಡೆಪ್ತಾನ್, ದ್ವಿತೀಯ ದರ್ಜೆ ಸಹಾಯಕರು, ಪೊಲೀಸ್ ತರಬೇತಿ ಶಾಲೆ, ಖಾನಾಪುರ, ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಡಿ.ಜಿ. ಮತ್ತು ಐ.ಜಿ.ಪಿ. ಇವರ ಪತ್ರ ಸಂಖ್ಯೆ: 28/ಸಿಬ್ಬಂದಿ-5/2001-02, ದಿನಾಂಕ: 15.04.2002, 16.07.2003, 11.02.2004 ಮತ್ತು 24.03.2004.

**ಪ್ರಸ್ತಾವನೆ:**

ಶ್ರೀ ಎಲ್.ಜಿ. ಡೆಪ್ತಾನ್, ಇವರು ಅನುಕಂಪದ ಆಧಾರದ ಮೇರೆಗೆ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನೇಮಕಗೊಂಡು ದಿನಾಂಕ: 06.08.1998 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರು 02 ವರ್ಷಗಳ ಅರ್ಹತಾಪೂರ್ವ ಅವಧಿಯಲ್ಲಿ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಒಂದಾದ ಪೊಲೀಸ್ ಮ್ಯಾನ್ಯುಯಲ್‌ನಲ್ಲಿ ತೇರ್ಗಡೆ ಹೊಂದದೇ ಇದ್ದುದರಿಂದ ನೇಮಕಾತಿ ಪ್ರಾಧಿಕಾರವು ಇವರ ಅರ್ಹತಾಪೂರ್ವ ಅವಧಿಯನ್ನು ದಿನಾಂಕ: 06.08.2000 ರಿಂದ 05.08.2001 ರವರೆಗೆ ವಿಸ್ತರಿಸಲಾಗಿದ್ದು, ತದನಂತರ 2003ನೇ ಸಾಲಿನ ಎರಡನೇ ಅಧಿವೇಶನದಲ್ಲಿ ಪೊಲೀಸ್ ಮ್ಯಾನ್ಯುಯಲ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಸದರಿ ನೌಕರರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ/ನ್ಯಾಯಾಂಗ ನಡವಳಿ/ಶಿಕ್ಷೆಗಳು ಇರುವುದಿಲ್ಲವೆಂದು ಹಾಗೂ ಇವರ ಸೇವೆಯು ತೃಪ್ತಿಕರವಾಗಿರುತ್ತದೆಯೆಂದು ವರದಿ ಮಾಡುತ್ತಾ, ಶ್ರೀ ಎಲ್.ಜಿ. ಡೆಪ್ತಾನ್, ದ್ವಿತೀಯ ದರ್ಜೆ ಸಹಾಯಕರು, ಇವರ ಅರ್ಹತಾಪೂರ್ವ ಅವಧಿಯನ್ನು ದಿನಾಂಕ: 06.08.2001 ರಿಂದ 05.01.2004 ರವರೆಗೆ ವಿಸ್ತರಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಡಿ.ಜಿ. ಮತ್ತು ಐ.ಜಿ.ಪಿ. ರವರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 36 ಪೊಸಿಲಿ 2002, ಬೆಂಗಳೂರು, ದಿನಾಂಕ: 16ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಶ್ರೀ ಎಲ್.ಜಿ. ಡೆಪ್ತಾನ್, ದ್ವಿತೀಯ ದರ್ಜೆ ಸಹಾಯಕರು, ಪೊಲೀಸ್ ತರಬೇತಿ ಶಾಲೆ, ಖಾನಾಪುರ, ಇವರ ಅರ್ಹತಾಪೂರ್ವ ಅವಧಿಯನ್ನು ದಿನಾಂಕ: 06.08.2001 ರಿಂದ 05.01.2004 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಾವಳಿಗಳು 1977ರ ನಿಯಮ 4(1) (i) ರನ್ವಯ ಸರ್ಕಾರವು ವಿಸ್ತರಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಒಸಾಇ 2382 ಐಎಫ್ಎ 2005, ದಿನಾಂಕ: 27.01.2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 657 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**ವಿಷಯ:** ಶ್ರೀ ಗೋಪಾಲಕೃಷ್ಣ, ಎಹೆಚ್‌ಸಿ 386, ಸಿಎಆರ್ (ದ) ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಕೆಎಸ್‌ಆರ್‌ಪಿ (ದ) ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ/5/02-03/ಓಬಿ ಸಂಖ್ಯೆ: 384/03, ದಿನಾಂಕ: 03.09.2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, (ಆಡಳಿತ ಮತ್ತು ಸಿಎಆರ್) ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/75/2003, ದಿನಾಂಕ: 21.06.2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24.09.2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/56/2004, ದಿನಾಂಕ: 31.01.2005.

**ಪ್ರಸ್ತಾವನೆ:**

ಶ್ರೀ ಗೋಪಾಲಕೃಷ್ಣ, ಎಹೆಚ್‌ಸಿ 386 "ಜಿ" ಪಂಗಡ, ಸಿಎಆರ್ (ದ) ಬೆಂಗಳೂರು, ಶ್ರೀ ಡಿ. ರಾಮಚಂದ್ರ ಎಪಿಸಿ 1054 ಹಾಗೂ ಶ್ರೀ ಸುಬ್ರಮಣಿ ಎಪಿಸಿ 1110 ಇವರ ವಿರುದ್ಧ ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

"ಎಹೆಚ್‌ಸಿ 386 ಶ್ರೀ ಗೋಪಾಲಕೃಷ್ಣ, ಜಿ ಪಂಗಡ ಸಿಎಆರ್ (ದ) ಬೆಂಗಳೂರು ಆದ ನಿಮ್ಮನ್ನು ನಿಮ್ಹಾನ್ಸ್ ಆಸ್ಪತ್ರೆಯ ಕ್ರಿಮಿನಲ್ ವಾರ್ಡ್‌ನ ಖೈದಿಗಳ ಕಾವಲುದಳದ ಮುಖಂಡತ್ವ ಕರ್ತವ್ಯಕ್ಕೆ ನೇಮಿಸಲಾಗಿತ್ತು. ದಿನಾಂಕ: 11.02.2003 ರಂದು ಸಂಜೆ 6.00 ಗಂಟೆ ನಂತರ ನಿಯಮದ ಪ್ರಕಾರ ಕಾವಲು ದಳದಲ್ಲಿ ಹಾಜರಾಗಬೇಕಾಗಿದ್ದು, ನೀವು ಗೈರು ಹಾಜರಿ ಆದ ಪರಿಣಾಮವಾಗಿ, ಸದರಿ ಕಾವಲುದಳದಲ್ಲಿ ಪಹರೆ ಪೇದೆ 1054 ಶ್ರೀ ಡಿ. ರಾಮಚಂದ್ರ ಒಬ್ಬರೇ ಇದ್ದು, ಆಸ್ಪತ್ರೆಯಲ್ಲಿ ರಾತ್ರಿ ಊಟ ಕೊಡುವ ಸಂದರ್ಭದಲ್ಲಿ ಅವರ ಅಧೀನದಲ್ಲಿದ್ದ ಐದು ಜನ ವಿಚಾರಣಾಧೀನ ಖೈದಿಗಳಲ್ಲಿ

ಖೈದಿ ಸಂಖ್ಯೆ: 2787 ಚಂದ್ರಪ್ಪ ಎಂಬುವವರು ಸುಮಾರು 8.05ರ ಸಮಯದಲ್ಲಿ ಮಲ ವಿಸರ್ಜನೆ ಮಾಡುವ ನೆಪವೊಡ್ಡಿ ಆಸ್ಪತ್ರೆಯ ಕಿಟಕಿಯ ಕಬ್ಬಿಣದ ಮೆಶ್ ಮುರಿದು ತಪ್ಪಿಸಿಕೊಂಡು ಪರಾರಿಯಾಗಿರುತ್ತಾರೆ. ಇಂತಹ ಅತೀ ಮುಖ್ಯವಾದ ಖೈದಿಗಳ ಕಾವಲುದಳದಲ್ಲಿ ಸಮಯದಲ್ಲಿ ಸರಿಯಾಗಿ ನೀವು ಮತ್ತು ನಿರೀಕ್ಷಣಾ ಪಹರೆ ಪೇದೆಯೂ ಹಾಜರಾಗದೆ, ಪಹರೆ ಪೇದೆಗೆ ಸಹಾಯಕರಿಲ್ಲದ ಪರಿಸ್ಥಿತಿಯ ಲಾಭ ಪಡೆದು, ಅವರ ವಶದಿಂದ ವಿಚಾರಣಾಧೀನ ಖೈದಿ ಚಂದ್ರಪ್ಪ ತಪ್ಪಿಸಿಕೊಂಡು ಪರಾರಿಯಾಗಲು ನೀವು ಸಹ ಕಾರಣರಾಗಿರುತ್ತೀರಿ. ಇದು ನಿಮ್ಮ ಮುಖಂಡತ್ವ ಕರ್ತವ್ಯದಲ್ಲಿನ ಅತೀವ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿಯನ್ನು ಎತ್ತಿ ತೋರಿಸುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಸಲ್ಲಿಸಿದ ವರದಿಯಲ್ಲಿ ಆರೋಪವು ಸಾಬೀತಾಗಿದೆ ಎಂಬ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಕೆಎಸ್‌ಆರ್‌ಪಿ (ದ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 03.09.2003ರ ಆದೇಶದಲ್ಲಿ ಇವರ ವೇತನವನ್ನು ಮುಂದಿನ ವೇತನ ಬಡ್ತಿಗಳಿಗೆ ಅಡಚಣೆ ಆಗದಂತೆ ಐದು (05) ವರ್ಷಗಳ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಲಭ್ಯವಿರುವ ರಜೆಯನ್ನಾಗಿ ಪರಿಗಣಿಸಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, (ಆಡಳಿತ ಮತ್ತು ಸಿಎಆರ್) ಬೆಂಗಳೂರು, ಇವರು ಮೇಲ್ಮನವಿದಾರರು ತಮ್ಮ ಮೇಲಿನ ಆರೋಪವನ್ನು ಅಲ್ಲಗೆಳೆಯಲು ಯಾವುದೇ ಸಮರ್ಥವಾದ ಆಧಾರಗಳನ್ನು ನೀಡಿಲ್ಲವೆಂದು ಪರಿಗಣಿಸಿ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಎತ್ತಿ ಹಿಡಿಯುತ್ತಾ, ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 21.06.2004ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಒಬ್ಬ ಕುಖ್ಯಾತ ವಿಚಾರಣಾಧೀನ ಖೈದಿಗಳಿರುವ ಕ್ರಿಮಿನಲ್ ವಾರ್ಡ್‌ನ ಕಾವಲು ದಳಕ್ಕೆ ಗಾರ್ಡ್ ಕಮಾಂಡರ್ ಆಗಿ ನೇಮಿಸಿದಾಗ, ಆ ಕೆಲಸದ ಅತೀ ಸೂಕ್ಷ್ಮತೆಯನ್ನು ಮನಗಂಡು, ಎಚ್ಚರಿಕೆ ಹಾಗೂ ಹೆಚ್ಚಿನ ಜವಾಬ್ದಾರಿತನದಿಂದ ಕಾರ್ಯನಿರ್ವಹಿಸಬೇಕಾಗಿದ್ದು, ಅರ್ಜಿದಾರರು ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತನ, ಅಶಿಸ್ತು ತೋರಿಸಿರುವುದು ಕಂಡುಬರುತ್ತದೆ. ಪ್ರಕರಣದಲ್ಲಿ ಪೊಲೀಸರ ವಶದಿಂದ ಖೈದಿ ತಪ್ಪಿಸಿಕೊಂಡಿರುವುದು ಶಿಸ್ತು ಇಲಾಖೆಯ ನಿರ್ಲಕ್ಷ್ಯತನ ಎತ್ತಿ ತೋರಿಸುತ್ತದೆ. ಶಿಸ್ತು ಇಲಾಖೆಯಲ್ಲಿದ್ದು, ಈ ರೀತಿಯ ಬೇಜವಾಬ್ದಾರಿ, ನಿರ್ಲಕ್ಷ್ಯ, ಅಶಿಸ್ತು ಪ್ರದರ್ಶಿಸಿರುವುದನ್ನು ಗಂಭೀರವಾಗಿ ಪರಿಗಣಿಸಿ, ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಲು ಯಾವುದೇ ಸಮರ್ಥನೆ ಹಾಗೂ ಹೊಸ ಅಂಶಗಳೇನು ಇರುವುದಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 201 ಪೊಸಿಅ 2004, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗೋಪಾಲಕೃಷ್ಣ, ಎಹೆಚ್‌ಸಿ 386, ಸಿಎಆರ್ (ದ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ರಂಗಮಣಿ**

ಪಿ.ಆರ್. 658 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯ ಯೋಜನೆಯಡಿ 64 ಜೀತ ವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವ ಸಲುವಾಗಿ ತುಮಕೂರು ಮತ್ತು ಹಾಸನ ಜಿಲ್ಲಾ ಪಂಚಾಯತಿಗಳಿಗೆ 2005-06ನೇ ಸಾಲಿನಲ್ಲಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕಾರ್ಮಿಕ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಆದೇಶ ಸಂಖ್ಯೆ: ಎಸ್-11011/5/98-ಬಿಎಲ್, ದಿನಾಂಕ: 18.2.2005.
2. ಸರ್ಕಾರೀ ಆದೇಶ ಸಂಖ್ಯೆ: ಗ್ರಾಅಪ 4 ಆರ್‌ಬಿಎಲ್ 2004, ದಿನಾಂಕ: 30.3.2005.

**ಪ್ರಸ್ತಾವನೆ:**

2002-03 ಹಾಗೂ 2003-04ನೇ ಸಾಲುಗಳಲ್ಲಿ ರಾಜ್ಯಾದ್ಯಂತ ಕೈಗೊಳ್ಳಲಾದ ನಿರಂತರ ಸಮೀಕ್ಷಾ ಕಾರ್ಯದಲ್ಲಿ, ತುಮಕೂರು ಜಿಲ್ಲೆಯಲ್ಲಿ ಗುರುತಿಸಿ, ಜೀತಪದ್ಧತಿಯಿಂದ ಬಿಡುಗಡೆಗೊಳಿಸಲಾದ ಒಟ್ಟು 64 ಜೀತವಿಮುಕ್ತರಿಗೆ (ಹಾಸನ ಜಿಲ್ಲೆಗೆ ವರ್ಗಾಯಿಸಲಾದ 1 ಪ್ರಕರಣವು ಸೇರಿ) ಪುನರ್ವಸತಿ ಕಲ್ಪಿಸಲು ಒಟ್ಟು ರೂ.12,80,000.00 ಗಳನ್ನು ಬಿಡುಗಡೆ ಮಾಡುವಂತೆ ತುಮಕೂರು ಹಾಗೂ ಹಾಸನ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯ ಯೋಜನೆಯಡಿ ಪ್ರತಿ ಜೀತ ವಿಮುಕ್ತರ ಪುನರ್ವಸತಿಗಾಗಿ ತಲಾ ರೂ.20,000/- ಗಳನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಶೇ.50:50ರ ಅನುಪಾತದಲ್ಲಿ ಒದಗಿಸಬೇಕಾಗಿರುತ್ತದೆ. ಅದರಂತೆ ಕೇಂದ್ರ ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಕೇಂದ್ರದ ಪಾಲಿನ ಅನುದಾನ ರೂ.6,40,000.00 ಗಳನ್ನು ರಾಜ್ಯ ಸರ್ಕಾರಕ್ಕೆ ನೇರವಾಗಿ ಬಿಡುಗಡೆ ಮಾಡಿರುತ್ತದೆ. ಕೇಂದ್ರದ ಪಾಲಿನ ಸದರಿ ಅನುದಾನವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಈಗಾಗಲೇ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಲಾಗಿದೆ. ಹಾಲಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು 2005-06ನೇ ಸಾಲಿನಲ್ಲಿ ಸದರಿ 64 ಜೀತ ವಿಮುಕ್ತರಿಗೆ ಪುನರ್ವಸತಿ ಕಲ್ಪಿಸಲು ತುಮಕೂರು ಹಾಗೂ ಹಾಸನ ಜಿಲ್ಲಾ ಪಂಚಾಯತಿಗಳಿಗೆ (ಕೋಷ್ಟಕದಲ್ಲಿ ತೋರಿಸಿರುವಂತೆ) ಬಿಡುಗಡೆ ಮಾಡಲು ನಿರ್ಧರಿಸಿರುತ್ತೆ. ಅದಕ್ಕಾಗಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 4 ಆರ್‌ಬಿಎಲ್ 2004, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2005**

ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯ ಯೋಜನೆಯನ್ವಯ 2005-06ನೇ ಸಾಲಿನಲ್ಲಿ ಒಟ್ಟು 64 ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸಲು ರಾಜ್ಯದ ಪಾಲಿನ ಅನುದಾನ ರೂ.6,40,000.00 ಗಳನ್ನು (ಆರು ಲಕ್ಷ ನಲವತ್ತು ಸಾವಿರ ರೂಪಾಯಿಗಳು ಮಾತ್ರ) ಕೆಳಕಂಡ

ಕೋಷ್ಟಕದಂತೆ ತುಮಕೂರು ಹಾಗೂ ಹಾಸನ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

**ಕೋಷ್ಟಕ**

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿ ಹೆಸರು | ಆಬ್ಜೆಕ್ಟ್ ಹೆಡ್ (object head) | ಜೀತವಿಮುಕ್ತರ ಸಂಖ್ಯೆ | ಪುನರ್ವಸತಿ ಧನ (ರೂ.ಗಳಲ್ಲಿ) |
|---|---|---|---|---|
| 1 | ತುಮಕೂರು | 406 | 63 | 6,30,000.00 |
| 2 | ಹಾಸನ | 410 | 01 | 0,10,000.00 |
| | **ಒಟ್ಟು** | | **64** | **6,40,000.00** |

ತುಮಕೂರು ಹಾಗೂ ಹಾಸನ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಸದರಿ ಅನುದಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವ ಉದ್ದೇಶಕ್ಕೆ ಮಾತ್ರ ಬಳಸಿಕೊಳ್ಳಲು ಅನುಮತಿಸಲಾಗಿದೆ.

1. ಕೋಷ್ಟಕದಲ್ಲಿನ ಜೀತವಿಮುಕ್ತರು ಈ ಹಿಂದೆ ಜೀತದಾಳುಗಳಾಗಿದ್ದರು ಹಾಗೂ ಅವರನ್ನು ಜೀತಕ್ಕಿರಿಸಿಕೊಂಡಿದ್ದ ಮಾಲೀಕರನ್ನು ಫಿರ್ಯಾದು ಮಾಡಲು ಪ್ರತ್ಯೇಕವಾಗಿ ಕ್ರಮ ತೆಗೆದುಕೊಳ್ಳಲಾಗುತ್ತೆಂಬ ಬಗ್ಗೆ ದೃಢೀಕರಣವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂಧ ಪಡೆದುಕೊಂಡು, ಸದರಿ ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವುದು.
2. ರಾಜ್ಯ ಸರ್ಕಾರದ ದಿನಾಂಕ: 11.10.2001 ಹಾಗೂ 15.10.2001ರ ಅರೆ ಸರ್ಕಾರಿ ಪತ್ರ ಸಂಖ್ಯೆ: ಆರ್‌ಡಿಪಿ 26 ಆರ್‌ಬಿಎಲ್ 2000 ರೊಂದಿಗೆ ಕ್ರಮವಾಗಿ ಎಲ್ಲಾ ಜಿಲ್ಲಾಧಿಕಾರಿಗಳಿಗೂ ಹಾಗೂ ಎಲ್ಲಾ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೂ ಕಳುಹಿಸಿರುವ ಕೇಂದ್ರ ಸರ್ಕಾರದ ದಿನಾಂಕ: 8.8.2000ರ ಆದೇಶ ಸಂಖ್ಯೆ: ಆರ್-11011/2/98/ಬಿಎಲ್ ರಲ್ಲಿ ಸೂಚಿಸಿರುವ ಮಾರ್ಗಸೂಚಿಗಳ ಅನುಸಾರ ಪುನರ್ವಸತಿ ಧನವನ್ನು ವೆಚ್ಚ ಮಾಡತಕ್ಕದ್ದು.
3. ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 146 ಯೋಉಮೌ 2004, ದಿನಾಂಕ: 16.10.2004 ರಂತೆ ಹಾಗೂ ಸರ್ಕಾರೀ ಸುತ್ತೋಲೆ ಸಂಖ್ಯೆ: ಗ್ರಾಅಪ 17 ಆರ್‌ಬಿಎಲ್ 2004, ದಿನಾಂಕ: 8.11.2004 ರಂತೆ ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯಕ್ರಮವನ್ನು ರಾಜ್ಯ ವಲಯದಿಂದ ಜಿಲ್ಲಾ ವಲಯಕ್ಕೆ ವರ್ಗಾಯಿಸಿರುವ ಹಿನ್ನಲೆಯಲ್ಲಿ, ಸದರಿ ಅನುದಾನವನ್ನು ಸಂಬಂಧಪಟ್ಟ ಗ್ರಾಮ ಪಂಚಾಯತಿಗಳಿಗೆ ಮರು ಬಿಡುಗಡೆ ಮಾಡಿ ಕಾರ್ಯಾನುಷ್ಠಾನಗೊಳಿಸತಕ್ಕದ್ದು.
4. ಭಾರತದ ಕಂಟ್ರೋಲರ್ ಮತ್ತು ಮಹಾಲೇಖಪಾಲರು ಇಚ್ಛಿಸಿ ಪಟ್ಟಲ್ಲಿ ಟೆಸ್ಟ್ ಚೆಕ್‌ಗೆ ಒದಗಿಸಲು ಪ್ರತಿಯೋಜನೆವಾರು ವೆಚ್ಚದ ಲೆಕ್ಕಪತ್ರಗಳನ್ನು ಸದರಿ ಜಿಲ್ಲಾ ಪಂಚಾಯತಿ/ಗ್ರಾಮ ಪಂಚಾಯತಿಗಳು ನಿರ್ವಹಿಸತಕ್ಕದ್ದು.
5. 1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನ) ಕಾಯ್ದೆ ಹಾಗೂ ಅದರಡಿ ರೂಪಿಸಿರುವ ನಿಯಮಗಳಂತೆ ಗುರುತಿಸಿ ಜೀತಪದ್ಧತಿಯಿಂದ ಬಿಡುಗಡೆಗೊಳಿಸಲಾದ ಜೀತವಿಮುಕ್ತರಿಗೆ ಮಾತ್ರ ಈ ಯೋಜನೆಯಡಿ ಸಹಾಯ ಸೌಲಭ್ಯಗಳನ್ನು ಕಲ್ಪಿಸತಕ್ಕದ್ದು.
6. ಈ ಯೋಜನೆಯಡಿ ಪುನರ್ವಸತಿ ಸೌಲಭ್ಯವನ್ನು ಒದಗಿಸುವಾಗ ಸುಮಾರು 5 ವರ್ಷ ಅಥವಾ ಅದಕ್ಕಿಂತ ಹೆಚ್ಚಿನ ಅವಧಿಯಿಂದ ಜೀತಪದ್ಧತಿಯಡಿ ಸಂಕಷ್ಟದಲ್ಲಿದ್ದಂತಹ ಜೀತದಾಳುಗಳಿಗೆ ಆದ್ಯತೆಯನ್ನು ನೀಡತಕ್ಕದ್ದು.
7. ಬಿಡುಗಡೆ ಮಾಡಿರುವ ಅನುದಾನವನ್ನು ಪ್ರಸಕ್ತ ಸಾಲಿನಲ್ಲೇ ಖಜಾನೆಯಿಂದ ಸೆಳೆದು ಯಾವುದೇ ಕಾರಣಕ್ಕೂ ಕಾಯ್ದಿರಿಸದೇ ಜೀತವಿಮುಕ್ತರ ಪುನರ್ವಸತಿಗಾಗಿ ಕೂಡಲೇ ಬಳಕೆ ಮಾಡತಕ್ಕದ್ದು.
8. ವೆಚ್ಚ ಮಾಡಲಾದ ಅನುದಾನಕ್ಕೆ ಹಣಬಳಕೆ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಲಾದ ತಃಖ್ತೆಗಳನ್ನು ಸರ್ಕಾರಕ್ಕೆ ತಪ್ಪದೇ ಕಳುಹಿಸತಕ್ಕದ್ದು. ಕೇಂದ್ರ ಸರ್ಕಾರವು ನಿಗದಿಪಡಿಸಿರುವ ನಮೂನೆಯಲ್ಲಿ ಪ್ರತಿ ಮಾಹೆಯೂ ಭೌತಿಕ ಹಾಗೂ ಆರ್ಥಿಕ ಪ್ರಗತಿ ವರದಿಗಳನ್ನು ನಿಯತಕಾಲಿಕವಾಗಿ ತಪ್ಪದೇ ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ಕಳುಹಿಸತಕ್ಕದ್ದು.
9. ಎಲ್ಲಾ ವೆಚ್ಚಗಳನ್ನು ಲೆಕ್ಕಶೀರ್ಷಿಕೆ 2230-ಕಾರ್ಮಿಕ ಮತ್ತು ಉದ್ಯೋಗ-01-ಕಾರ್ಮಿಕ-198-ಗ್ರಾಮ ಪಂಚಾಯತಿಗಳಿಗೆ ಸಹಾಯ-1-ಗ್ರಾಮ ಪಂಚಾಯತಿಗಳು-01-ಬ್ಲಾಕ್ ಅನುದಾನ (ಜೀತದಾಳುಗಳ ಪುನರ್ವಸತಿ) (ಯೋಜನೆ)ಗೆ ಜಮಾ ಮಾಡತಕ್ಕದ್ದು.
10. ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂಖ್ಯೆ: ಗ್ರಾಅಪ 128 ಪಿಬಿಎಸ್ 05, ದಿನಾಂಕ: 19.4.2005 ರಂತೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹಿರೇಮಣಿಯವರ್**

ಪಿ.ಆರ್. 659

ನಿರ್ದೇಶಕರು,

ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕರ್ನಾಟಕ ಸರ್ಕಾರದ ಸಚಿವಾಲಯ

**ಸುತ್ತೋಲೆ ಸಂಖ್ಯೆ: ಸಂಕಇ 30 ಕರಅ 2005, ಬೆಂಗಳೂರು, ದಿನಾಂಕ: 11ನೇ ಏಪ್ರಿಲ್ 2005**

ಕರ್ನಾಟಕ ರಾಜ್ಯವು ಏಕೀಕರಣಗೊಂಡು 1ನೇ ನವೆಂಬರ್ 2006ಕ್ಕೆ 50 ವರ್ಷಗಳಾಗುವ ಸಂದರ್ಭದಲ್ಲಿ ಈ 2006ನೇ ವರ್ಷವನ್ನು **ಸುವರ್ಣ ಕರ್ನಾಟಕ ವರ್ಷ** ವೆಂದು ಅರ್ಥಪೂರ್ಣವಾಗಿ ಆಚರಿಸಲು ಸರ್ಕಾರವು ಉದ್ದೇಶಿಸಿದೆ. ಹಾಗೂ ಈ ಪ್ರಯುಕ್ತ ಸುವರ್ಣ ಕರ್ನಾಟಕ ಆಚರಣೆಗೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಸರ್ಕಾರದ ಎಲ್ಲಾ ಪತ್ರಗಳು ಮತ್ತು ಲಕೋಟೆಗಳ ಮೇಲೆ **ಸುವರ್ಣ ಕರ್ನಾಟಕ - 2006** ಎಂದು ಮುದ್ರಿಸುವ ವಿಷಯದಲ್ಲಿ ಮಾನ್ಯ ಕಂದಾಯ ಹಾಗೂ ಸಂಸದೀಯ ವ್ಯವಹಾರಗಳ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ:

10.12.2004ರ ಸಚಿವ ಸಂಪುಟದ ಉಪ ಸಮಿತಿಯ ಸಭೆಯಲ್ಲಿ ಈ ತೀರ್ಮಾನವನ್ನು ತೆಗೆದುಕೊಳ್ಳಲಾಗಿದೆ. ಅಂತೆಯೇ ಈ ಬಗ್ಗೆ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಸೂಕ್ತ ಸೂಚನೆಯನ್ನು ನೀಡಲಾಗಿದೆ.

ಈ ದಿಸೆಯಲ್ಲಿ ಸರ್ಕಾರದ ಇತರೆ ಎಲ್ಲಾ ಇಲಾಖಾ ಪ್ರಧಾನ ಕಾರ್ಯದರ್ಶಿಗಳು : ಕಾರ್ಯದರ್ಶಿಗಳು ಮತ್ತು ಮುಖ್ಯಸ್ಥರುಗಳು ಅವರ ಅಧೀನದಲ್ಲಿ ಬರುವ ಕ್ಷೇತ್ರ ಇಲಾಖೆಗಳು, ಜಿಲ್ಲಾ ಕಛೇರಿಗಳು, ಸರ್ಕಾರದಿಂದ ಅನುದಾನ ಪಡೆಯುವ ಸ್ವಾಯುತ್ತ ಸಂಸ್ಥೆಗಳು : ನಿಗಮಗಳು, ಎಲ್ಲಾ ಸರ್ಕಾರಿ ಶಿಕ್ಷಣ ಸಂಸ್ಥೆಗಳು (ಅನುದಾನಿತ ಮತ್ತು ಅನುದಾನ ರಹಿತ ಸಂಸ್ಥೆಗಳನ್ನೊಳಗೊಂಡಂತೆ) ಪತ್ರ ವ್ಯವಹಾರಗಳ ಬಗ್ಗೆ ತಮ್ಮದೇ ಆದ ಮೂಲ ಸೌಲಭ್ಯಗಳನ್ನು ಹೊಂದಿರುವುದರಿಂದ ಈ ಎಲ್ಲಾ ಸರ್ಕಾರಿ ಇಲಾಖೆಗಳು ಮತ್ತು ಸಂಸ್ಥೆಗಳು ಪತ್ರಗಳನ್ನು ಮತ್ತು ಲಕೋಟೆಗಳನ್ನು ಮುದ್ರಿಸುವ ವೇಳೆಯಲ್ಲಿ ಅಂತಹ ಪತ್ರ ಮತ್ತು ಲಕೋಟೆಗಳ ಮೇಲೆ ತಪ್ಪದೇ **ಸುವರ್ಣ ಕರ್ನಾಟಕ - 2006** ಎಂದು ಮುದ್ರಿಸುವ ವ್ಯವಸ್ಥೆಯನ್ನು ಮಾಡಬೇಕೆಂಬ ಸರ್ಕಾರದ ನಿರ್ದೇಶನವನ್ನು ಈ ಸುತ್ತೋಲೆ ಮೂಲಕ ತಿಳಿಸಲಾಗಿದೆ.

ಅಂತೆಯೇ ಈ ಉದ್ದೇಶವನ್ನು ಗಮನದಲ್ಲಿರಿಸಿಕೊಂಡು ಎಲ್ಲಾ ಇಲಾಖಾ ಪ್ರಧಾನ ಕಾರ್ಯದರ್ಶಿಗಳು : ಕಾರ್ಯದರ್ಶಿಗಳು : ಇಲಾಖಾ ಮುಖ್ಯಸ್ಥರುಗಳಿಗೆ ಅವರ ಆಡಳಿತಾತ್ಮಕ ಅಡಿ ಬರುವ ಎಲ್ಲಾ ಇಲಾಖೆಗಳು : ಸ್ವಾಯತ್ತ ಸಂಸ್ಥೆಗಳು : ನಿಗಮಗಳು ಮತ್ತು ಶಿಕ್ಷಣ ಸಂಸ್ಥೆಗಳಿಗೆ ಸೂಕ್ತ ಸೂಚನೆಗಳನ್ನು ಹೊರಡಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ವಿಜಯ ಗೋರೆ**

ಪಿ.ಆರ್. 660 ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ.

## ಕಾರ್ಮಿಕ ಸಚಿವಾಲಯ

**ವಿಷಯ:** ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿ ವರ್ಗಕ್ಕೆ ಶೇ.70 ರಿಂದ ಶೇ.75ಕ್ಕೆ ಅನುದಾನ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಾಇ 56 ಇಟಿಎ 99, ದಿನಾಂಕ: 13.8.2001.

2) ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಅವರ ಪತ್ರ ಸಂಖ್ಯೆ: ಉತಇ/ತ/ಸಂ-1/ವಿವ-80/2003-2004, ದಿನಾಂಕ: 29.09.2004.

**ಪ್ರಸ್ತಾವನೆ:**

ಮೇಲೆ ಓದಲಾದ (1) ಸರ್ಕಾರದ ಆದೇಶ ಸಂಖ್ಯೆ: ದಿನಾಂಕ: 13.08.2001 ರಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ನೌಕರರಿಗೆ ಶೇ.70 ರಂತೆ ಪರಿಷ್ಕರಿಸಿ ಸಹಾಯಾನುದಾನ ಬಿಡುಗಡೆ ಮಾಡಲಾಗಿತ್ತು.

ಮೇಲೆ ಓದಲಾದ (2) ದಿನಾಂಕ: 29.9.2004ರ ಪತ್ರದಲ್ಲಿ ನಿರ್ದೇಶಕರು, ಉದ್ಯೋಗ ತರಬೇತಿ ಇಲಾಖೆ, ಬೆಂಗಳೂರು, ಇವರು ಹಾಗೂ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ನೌಕರರ ಸಂಘಗಳು, ಶಾಸಕರು ಹಾಗೂ ಗಣ್ಯ ವ್ಯಕ್ತಿಗಳಿಂದ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗಳಿಗೆ ಶೇ.70 ರಿಂದ ಶೇ.100 ಸಹಾಯಾನುದಾನ ಬಿಡುಗಡೆ ಮಾಡಲು ಮನವಿಗಳು ಬಂದಿರುತ್ತವೆ.

ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಅವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 10 ಇಟಿಎ 2005, ಬೆಂಗಳೂರು, ದಿನಾಂಕ: 9ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶದ ಹಿನ್ನೆಲೆಯಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ನೌಕರರಿಗೆ ಸಹಾಯಾನುದಾನವನ್ನು ಶೇ.70 ರಿಂದ ಶೇ.75ಕ್ಕೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಹೆಚ್ಚುವರಿ ಮಾಡಲು ಮಂಜೂರಾತಿ ನೀಡಲಾಗಿದೆ.

ಬಿಡುಗಡೆ ಮಾಡಲಾದ ಮೊಬಲಗನ್ನು ಮೊದಲು ಸಾದಿಲ್ವಾರು ನಿಧಿಯಿಂದ ಲೆಕ್ಕ ಶೀರ್ಷಿಕೆ " 800-00-240-0-00-ಕಾರ್ಮಿಕ ಮತ್ತು ಉದ್ಯೋಗ " ದಡಿಯಲ್ಲಿ ಬಿಡುಗಡೆ ಮಾಡಿ ನಂತರ ಲೆಕ್ಕ ಶೀರ್ಷಿಕೆ " 2230-03-101-0-101(ಪಿ)" ಭರಿಸಿ ಪೂರಕ ಅಂದಾಜುಗಳಲ್ಲಿ ಸಹಾಯಾನುದಾನ ನಿಧಿಗೆ ಮರು ತುಂಬಲಾಗುವುದು. ಆರ್ಥಿಕ ಇಲಾಖೆಯು ಈ ಮೊಬಲಗನ್ನು ಸಾದಿಲ್ವಾರು ನಿಧಿಯಿಂದ ಬಿಡುಗಡೆ ಮಾಡಿ ಪ್ರತ್ಯೇಕ ಆದೇಶ ಹೊರಡಿಸುವುದು. ಆರ್ಥಿಕ ಇಲಾಖೆಯ ಆದೇಶದ ಮೇಲೆಯೇ ಮೊಬಲಗು ಬಿಡುಗಡೆ ಮಾಡಲಾಗುವುದೇ ಹೊರತು ಈ ಆದೇಶದ ಮೇಲೆ ಮೊಬಲಗು ಪಡೆಯುವಂತಿಲ್ಲ. ಹಣ ಪಡೆಯುವ ಅಧಿಕಾರಿಯು ಸಾದಿಲ್ವಾರು ನಿಧಿಯಿಂದ ಹಣವನ್ನು ಪಡೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸುವಾಗ ಇಲಾಖೆಯ ಆದೇಶಕ್ಕೆ ಆರ್ಥಿಕ ಇಲಾಖೆಯು ಹೊರಡಿಸುವ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆಯ ಆದೇಶಕ್ಕೆ ಆರ್ಥಿಕ ಇಲಾಖೆಯು ಹೊರಡಿಸುವ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆಯಿಂದ ಹಣವನ್ನು ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲಾಗುವುದು.

1) ಅನುದಾನ ಸಂಹಿತೆಯಲ್ಲಿ ವಿಧಿಸಿರುವ ಎಲ್ಲಾ ನಿಬಂಧನೆಗಳನ್ನು ಪರಿಪಾಲಿಸಿರುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.
2) ಲೆಕ್ಕ ಪರಿಶೋಧನೆಯ ನಂತರವೇ ಮತ್ತು ಉಳಿದ ಶೇ.25 ರಷ್ಟನ್ನು ಸಂಸ್ಥೆಗಳು ಭರಿಸಿದ ನಂತರ ಈ ಹಣವನ್ನು ಬಿಡುಗಡೆ ಮಾಡತಕ್ಕದ್ದು.
3) ಕಾರ್ಮಿಕ ಇಲಾಖೆಯು ಅನಂತರ ಅಥವಾ ಮುಂದಿನ ವರ್ಷಗಳಲ್ಲಿ ಈ ಬಗ್ಗೆ ಹೆಚ್ಚಿನ ಅನುದಾನಕ್ಕೆ ಬೇಡಿಕೆ ಸಲ್ಲಿಸಕೂಡದು.
4) ಇಲಾಖೆಯು ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಸಂಬಂಧಿಸಿದ ಎಕ್ಸಿಟ್ ಪಾಲಿಸಿಯನ್ನು ಆರ್ಥಿಕ ಇಲಾಖೆಯ ಪ್ರತಿನಿಧಿಯನ್ನೊಳಗೊಂಡ ಸಮಿತಿಯ ಮೂಲಕ ಸಲ್ಲಿಸತಕ್ಕದ್ದು.
5) ಆರ್ಥಿಕ ಇಲಾಖೆಯ ಅನುಮೋದನೆ ಇಲ್ಲದೇ ಯಾವುದೇ ವೃತ್ತಿ, ಹುದ್ದೆಗಳನ್ನು ಸಂಸ್ಥೆಗಳು ಅನುದಾನಕ್ಕೆ ಒಳಪಡಿಸುವಂತಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 23 ವೆಚ್ಚ-9 2004, ದಿನಾಂಕ: 26.4.2005 ರಲ್ಲಿ ಸಹಮತಿ ನೀಡಿದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ನಾಗರಾಜ**

ಪಿ.ಆರ್. 661 ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಗ್ರಾಮೀಣ ಕೃಪಾಂಕ ಸೌಲಭ್ಯ ಪಡೆಯದ ಸೇವೆಯಿಂದ ವಿಮೋಚನೆಗೊಳಿಸಲ್ಪಟ್ಟ ಅಭ್ಯರ್ಥಿಗಳನ್ನು ಸೇವೆಯಲ್ಲಿ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 939 ಹೆಚ್ಎಸ್ಹೆಚ್ 2003, ದಿನಾಂಕ: 20.12.2003.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 939 ಹೆಚ್ಎಸ್ಹೆಚ್ 2003, ದಿನಾಂಕ: 30.12.2003.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 122 ಹೆಚ್ಎಸ್ಹೆಚ್ 2004, ದಿನಾಂಕ: 6.12.2004.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 472 ಹೆಚ್ಎಸ್ಹೆಚ್ 2003, ದಿನಾಂಕ: 13.1.2005.
5. ಆಯುಕ್ತರು, ಆಕುಕ ಸೇವೆಗಳು ಇವರ ಪತ್ರ ಸಂಖ್ಯೆ: ಡಿಆರ್‌ಸಿ 42(1)/98-99, ದಿನಾಂಕ: 24.03.2005.

**ಪ್ರಸ್ತಾವನೆ:**

ಗ್ರಾಮೀಣ ಕೃಪಾಂಕ ಸೌಲಭ್ಯದ ಆಧಾರದ ಮೇಲೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಹುದ್ದೆಗೆ ನೇಮಕಾತಿ ಮಾಡಲಾಗಿದ್ದುದರ ಬಗ್ಗೆ ಘನ ಸರ್ವೋಚ್ಚ ನ್ಯಾಯಾಲಯವು ನೀಡಿದ ಆದೇಶದನ್ವಯ ಸದರಿ ನೇಮಕಾತಿ ಪ್ರಕ್ರಿಯೆಯನ್ನು ಪರಿಷ್ಕರಿಸಿ, ಗ್ರಾಮೀಣ ಕೃಪಾಂಕ ರಹಿತ ಪರಿಷ್ಕೃತ ಆಯ್ಕೆಪಟ್ಟಿಯನ್ನು ತಯಾರಿಸಲಾಯಿತು. ಅದರಂತೆ ಸದರಿ ಪರಿಷ್ಕೃತ ಆಯ್ಕೆಪಟ್ಟಿಯಲ್ಲಿ ಆಯ್ಕೆಗೊಳ್ಳದ ಅಭ್ಯರ್ಥಿಗಳನ್ನು ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಆದೇಶದಲ್ಲಿ ಸೇವೆಯಿಂದ ವಿಮೋಚನೆಗೊಳಿಸಲಾಗಿರುತ್ತದೆ. ತದನಂತರ ಕ್ರಮಾಂಕ (2) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಅಭ್ಯರ್ಥಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲಾಗಿರುತ್ತದೆ. ಈ ಪರಿಷ್ಕೃತ ಪಟ್ಟಿಯಲ್ಲಿ ಈ ಕೆಳಕಂಡ ಅಭ್ಯರ್ಥಿಗಳನ್ನು ಗ್ರಾಮೀಣ ಕೃಪಾಂಕ ಸೌಲಭ್ಯ ಪಡೆದ ಅಭ್ಯರ್ಥಿಯೆಂದು ಗ್ರಹಿಸಿ, ಸೇವೆಯಿಂದ ವಿಮೋಚನೆಗೊಳಿಸಲಾಗಿರುತ್ತದೆ.

1. ಡಾ: ಸುಧಾರಾಣಿ ಎಸ್.ವಿ.
2. ಡಾ: ಸುಶೀಲಾ ಇ.
3. ಡಾ: ಮಲ್ಲಿಕಾರ್ಜುನ ಎಂ.
4. ಡಾ: ರೇಣುಕ

ಏತನ್ಮಧ್ಯೆ, ಮೇಲೆ ಕ್ರಮಾಂಕ (3) ಮತ್ತು (4) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಗಳಲ್ಲಿ ಸದರಿ ಅಭ್ಯರ್ಥಿಗಳಿಗೆ ಆದೇಶ ಹೊರಡಿಸಲಾದ ದಿನಾಂಕದಿಂದ ಜಾರಿಗೆ ಬರುವಂತೆ ನೇಮಕಾತಿ ಆದೇಶ ನೀಡಲಾಗಿರುತ್ತದೆ. ಅದರ ಮೇಲೆ ಕ್ರಮಾಂಕ (5) ರಲ್ಲಿ ಓದಲಾದ ಆಯುಕ್ತರ ಪತ್ರದಲ್ಲಿ ಪರಿಷ್ಕೃತ ಆಯ್ಕೆಪಟ್ಟಿಗೆ ಅಂತಿಮ ತಿದ್ದುಪಡಿಗಳನ್ನೊಳಗೊಂಡಂತೆ ವಿವರಣೆಗಳನ್ನು ನೀಡುತ್ತಾ, ಸದರಿ ಅಭ್ಯರ್ಥಿಗಳು ಗ್ರಾಮೀಣ ಕೃಪಾಂಕ ಸೌಲಭ್ಯ ಪಡೆಯದ ಅಭ್ಯರ್ಥಿಗಳು ಅಲ್ಲವಾಗಿದ್ದರೂ ಸಹ ಸೇವೆಯಿಂದ ತೆಗೆದುಹಾಕಲಾಗಿರುವುದರಿಂದ ಇವರನ್ನು ಸದರಿ ದಿನಾಂಕದಿಂದಲೇ ಪುನಃ ಕರ್ತವ್ಯಕ್ಕೆ ಸೇರಿಸಿಕೊಳ್ಳಬೇಕಾಗಿರುತ್ತದೆ ಎಂದು ಪ್ರಸ್ತಾಪಿಸಲಾಗಿರುತ್ತದೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 472 ಹೆಚ್ಎಸ್ಹೆಚ್ 2003, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಈ ಕೆಳಕಂಡ ಅಭ್ಯರ್ಥಿಗಳನ್ನು ಅವರುಗಳ ಹೆಸರಿನ ಮುಂದೆ ಸೂಚಿಸಲಾಗಿರುವ ಆದೇಶದಲ್ಲಿನ ದಿನಾಂಕಕ್ಕೆ ಬದಲಾಗಿ, ಇವರುಗಳನ್ನು ಗ್ರಾಮೀಣ ಕೃಪಾಂಕ ಅಭ್ಯರ್ಥಿಯೆಂದು ಸೇವೆಯಿಂದ ವಿಮೋಚನೆಗೊಳಿಸಲಾದ ಆದೇಶವನ್ನು ಹಿಂದಕ್ಕೆ ಪಡೆದು, ಸೇವೆಯಿಂದ ವಿಮೋಚನೆಗೊಳಿಸಲಾದ ದಿನಾಂಕ: 20.12.2003 ರಿಂದಲೇ ಜಾರಿಗೆ ಬರುವಂತೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಯ ವೇತನ ಶ್ರೇಣಿ ರೂ.7400-200-8800-260-10880-320-13120 ರಲ್ಲಿ ಅವರುಗಳು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳಗಳಲ್ಲಿಯೇ ಸೇವೆಯಲ್ಲಿ ಮುಂದುವರಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ವೈದ್ಯಾಧಿಕಾರಿಯ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಪರಿಷ್ಕೃತ ಪಟ್ಟಿಯನ್ವಯ ನೇಮಕ ಮಾಡಲಾದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ |
|---|---|---|
| 1 | ಡಾ: ಸುಧಾರಾಣಿ ಎಸ್.ವಿ., ಪ್ರಾ.ಆ. ಕೇಂದ್ರ, ಗೋಪಾಲಪುರ, ಬೆಂಗಳೂರು ನಗರ ಜಿಲ್ಲೆ. | ಆಕುಕ 472 ಹೆಚ್ಎಸ್ಹೆಚ್ 2003, ದಿನಾಂಕ: 13.1.2005. |
| 2 | ಡಾ: ಮಲ್ಲಿಕಾರ್ಜುನ ಎಂ., ಪ್ರಾ.ಆ.ಕೇಂದ್ರ, ಕಾಟೇನಹಳ್ಳಿ, ಹಾವೇರಿ ತಾಲ್ಲೂಕು : ಜಿಲ್ಲೆ. | ಆಕುಕ 472 ಹೆಚ್ಎಸ್ಹೆಚ್ 2003, ದಿನಾಂಕ: 13.1.2005. |
| 3 | ಡಾ: ಸುಶೀಲಾ ಇ., ಪ್ರಾ.ಆ.ಕೇಂದ್ರ, ಎಲೆರಾಂಪುರ, ಕೊರಟಗೆರೆ ತಾ: ತುಮಕೂರು ಜಿಲ್ಲೆ. | ಆಕುಕ 472 ಹೆಚ್ಎಸ್ಹೆಚ್ 2003, ದಿನಾಂಕ: 13.1.2005. |
| 4 | ಡಾ: ರೇಣುಕ, ಪ್ರಾ.ಆ.ಕೇಂದ್ರ, ಕಂದಿಕೆರೆ ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. | ಆಕುಕ 122 ಹೆಚ್ಎಸ್ಹೆಚ್ 2004, ದಿನಾಂಕ: 06.12.2004. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಜಗದೀಶಯ್ಯ**

ಪಿ.ಆರ್. 663 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಶ್ರೀ ಎಸ್.ವಿ. ಶ್ರೀನಿವಾಸ್, ಉಪ ಔಷಧ ನಿಯಂತ್ರಕರು, ಹಾಗೂ ಔಷಧ ನಿಯಂತ್ರಣ ಇಲಾಖೆಯ ಇತರ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** ಶ್ರೀ ಅಳಿಸಂದ್ರ ಮಂಜು, ಬೆಳ್ಳೂರು ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ, ಇವರ ಮನವಿಯ ದಿನಾಂಕ: 3.2.2005.

**ಪ್ರಸ್ತಾವನೆ:**

ಶ್ರೀ ಅಳಿಸಂದ್ರ ಮಂಜು, ನಂ.52, ಚುಂಚನಗಿರಿ ಕಾಂಪ್ಲೆಕ್ಸ್, ಬೆಳ್ಳೂರು, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ, ಇವರು ಮೇಲೆ ಓದಲಾದ ಪತ್ರದಲ್ಲಿ ಮೈಸೂರು ನಗರದಲ್ಲಿ ದಿನಾಂಕ: 27.1.2005 ರಂದು ಭಜರಂಗ ದಳದ ಕಾರ್ಯಕರ್ತರು ಔಷಧ ನಿಯಂತ್ರಣ ಇಲಾಖೆಯ

ಅಧಿಕಾರಿಗಳ ಜೊತೆಗೆ ಅಕ್ರಮವಾಗಿ ದಾಸ್ತಾನು ಮಾಡಲಾಗಿದ್ದ ಔಷಧ, ಮಾತ್ರೆಗಳನ್ನು ವಶಪಡಿಸಿಕೊಳ್ಳಲಾಗಿದ್ದು, ಈ ಔಷಧ ಮಾತ್ರೆಗಳು ಸರ್ಕಾರಿ ಆಸ್ಪತ್ರೆಗಳಲ್ಲಿ ಉಚಿತವಾಗಿ ನೀಡಲು ಆರೋಗ್ಯ ಇಲಾಖೆಯಿಂದ ಸರ್ಕಾರಿ ಆಸ್ಪತ್ರೆಗಳಿಗೆ ನೀಡಲಾಗಿದ್ದು, ಇವುಗಳನ್ನು ಖಾಸಗಿ ನರ್ಸಿಂಗ್ ಹೋಂ ಹಾಗೂ ಖಾಸಗಿ ಔಷಧಾಲಯಗಳಿಗೆ ಮಾರಾಟ ಮಾಡುತ್ತಿದ್ದುದಾಗಿ ತಿಳಿಸಿ, ಔಷಧಗಳನ್ನು ಅಕ್ರಮವಾಗಿ ದಾಸ್ತನು ಮಾಡಿದ ಬಗ್ಗೆ ಸಹಾಯಕ ಔಷಧ ನಿಯಂತ್ರಣಾಧಿಕಾರಿಗಳು ವೃತ್ತ-1 ಮೈಸೂರು, ಇವರಿಗೆ ದೂರು ನೀಡಲಾಗಿದ್ದು, ಇಲ್ಲಿಯವರೆಗೆ ತಪ್ಪಿತಸ್ಥರ ಮೇಲೆ ಯಾವುದೇ ಕ್ರಮ ಜರುಗಿಸಿಲ್ಲವೆಂದು ತಿಳಿಸಿರುತ್ತಾರೆ.

ಮೇಲ್ಕಂಡ ಪ್ರಕರಣದಲ್ಲಿ ಶ್ರೀ ಎಸ್.ವಿ. ಶ್ರೀನಿವಾಸ್, ಉಪ ಔಷಧ ನಿಯಂತ್ರಕರು, ರಕ್ತ ನಿಧಿ ಮತ್ತು ಗುಪ್ತ ವಾರ್ತಾ ವಿಭಾಗ, ಮೈಸೂರು, ಶ್ರೀ ಎಸ್.ಬಿ. ಜಯರಾಂ, ಸಹಾಯಕ ಔಷಧ ನಿಯಂತ್ರಕರು, ಮೈಸೂರು ವೃತ್ತ-1, ಶ್ರೀ ಅಣ್ಣಾರಾವ್ ಕೆ. ನಾಯಕ್, ಔಷಧ ಪರಿವೀಕ್ಷಕರು, ಮೈಸೂರು ವೃತ್ತ-1, ಹಾಗೂ ಶ್ರೀ ಸಿ. ಲಿಂಗರಾಜು, ಔಷಧ ಪರಿವೀಕ್ಷಕರು, ಮೈಸೂರು ವೃತ್ತ-1, ಇವರುಗಳು ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ. ಆದ್ದರಿಂದ ಸರ್ಕಾರವು ಸದರಿಯವರ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ಅಡಿಯಲ್ಲಿ ಅಮಾನತ್ತಿನಲ್ಲಿಟ್ಟು ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿದೆ, ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 39 ಐಎಂಎಂ 2005, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಔಷಧ ನಿಯಂತ್ರಣ ಇಲಾಖೆಯ ಶ್ರೀ ಎಸ್.ವಿ. ಶ್ರೀನಿವಾಸ್, ಉಪ ಔಷಧ ನಿಯಂತ್ರಕರು, ರಕ್ತ ನಿಧಿ ಮತ್ತು ಗುಪ್ತ ವಾರ್ತಾ ವಿಭಾಗ, ಮೈಸೂರು, ಶ್ರೀ ಎಸ್.ಬಿ. ಜಯರಾಂ, ಸಹಾಯಕ ಔಷಧ ನಿಯಂತ್ರಕರು, ಮೈಸೂರು ವೃತ್ತ-1, ಶ್ರೀ ಅಣ್ಣಾರಾವ್ ಕೆ. ನಾಯಕ್, ಔಷಧ ಪರಿವೀಕ್ಷಕರು, ಮೈಸೂರು ವೃತ್ತ-1 ಹಾಗೂ ಶ್ರೀ ಸಿ. ಲಿಂಗರಾಜು, ಔಷಧ ಪರಿವೀಕ್ಷಕರು, ಮೈಸೂರು ವೃತ್ತ-1 ಇವರುಗಳನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳು 1957ರ ನಿಯಮ 10 (1) (ಎ) ರನ್ವಯ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಮಾನತ್ತಿನಲ್ಲಿರಿಸಲಾಗಿದೆ.

ಸದರಿ ಅಧಿಕಾರಿಗಳು ಅಮಾನತ್ತಿನ ಅವಧಿಯಲ್ಲಿ ಸರ್ಕಾರದ ಪೂರ್ವಾನುಮತಿಯಿಲ್ಲದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ. ಸದರಿಯವರು ಅಮಾನತ್ತಿನಲ್ಲಿಡಲಾದ ಅವಧಿಯಲ್ಲಿ ನಿಯಮಾನುಸಾರ ಜೀವನಾಧಾರ ಭತ್ಯೆಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭಾಕರ್ ಎಂ. ಶೇಟ್**

ಪಿ.ಆರ್. 664 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಡಾ: ಜಿ.ಕೆ. ಪಾರ್ವತಿದೇವಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಎಲ್‌ಸಿಡಿಆರ್, ಗುಲ್ಬರ್ಗ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 668 ಹೆಚ್‌ಎಸ್‌ಹೆಚ್ 1994 ದಿನಾಂಕ: 25.7.1997.

2) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಜಿ (1) ಬೆಂವಿ:ಅಗೈ:55:2003-04, ದಿನಾಂಕ: 4.11.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಸರ್ಕಾರದ ಅಧಿಸೂಚನೆಯನ್ವಯ ಡಾ: ಜಿ.ಕೆ. ಪಾರ್ವತಿದೇವಿ, ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೇಮಕಾತಿ ಹೊಂದಿರುತ್ತಾರೆ. ಅದರಂತೆ ದಿನಾಂಕ: 12.8.1997 ರಂದು ಪ್ರಾಥಮಿಕ ಆರೋಗ್ಯ ಕೇಂದ್ರ, ಮುದ್ದೇನಹಳ್ಳಿ, ತುಮಕೂರು ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ತದನಂತರ ದಿನಾಂಕ: 10.8.1998 ರಿಂದ ಇದುವರೆವಿಗೂ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಇರುವಾಗಲೇ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಖಾಯಂಪೂರ್ವ ಸೇವಾ ನಿಯಮಗಳಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಕೋರಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 194 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಜಿ.ಕೆ. ಪಾರ್ವತಿದೇವಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಮುದ್ದೇನಹಳ್ಳಿ ತುಮಕೂರು ಜಿಲ್ಲೆ ಇವರು ದಿನಾಂಕ: 10.8.1998 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 10.8.1998 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಜಗದೀಶಯ್ಯ**

ಪಿ.ಆರ್. 665 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ಸೇವೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003, ದಿನಾಂಕ: 20.12.2003.

2. ಸರ್ಕಾರದ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003, ದಿನಾಂಕ: 30.12.2003.

3. ಆಯುಕ್ತರು, ಆಕುಕ ಸೇವೆಗಳು ಇವರ ಪತ್ರ ಸಂಖ್ಯೆ: ಜೆಆರ್‌ಓ (1-ಎ) 206/04-05, ದಿನಾಂಕ: 17.02.2005.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಗ್ರಾಮೀಣ ಕೃಪಾಂಕದಲ್ಲಿ ಆಯ್ಕೆಯಾದ 184 ವೈದ್ಯಾಧಿಕಾರಿಗಳನ್ನು ಸರ್ವೋಚ್ಛ ನ್ಯಾಯಾಲಯದ ಆದೇಶದನ್ವಯ ಸೇವೆಯಿಂದ ವಿಮೋಚನೆಗೊಳಿಸಲಾಗಿರುತ್ತದೆ. ತದನಂತರ ಕ್ರಮಾಂಕ (2) ರಲ್ಲಿ ಓದಲಾದ ಆದೇಶದಲ್ಲಿ

ಸದರಿ ಅಭ್ಯರ್ಥಿಗಳನ್ನು ಈ ಹಿಂದೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳದಲ್ಲಿಯೇ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿ ಆದೇಶಿಸಲಾಗಿತ್ತು. ಈ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಂಡ 184 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಗುತ್ತಿಗೆ ಸೇವೆಯು ದಿನಾಂಕ: 30.12.2004ಕ್ಕೆ ಒಂದು ವರ್ಷ ಪೂರ್ಣಗೊಳ್ಳುತ್ತದೆ.

ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರು ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡು ಕಾರ್ಯನಿರ್ವಹಿಸುತ್ತಿರುವ 184 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಗುತ್ತಿಗೆ ಅವಧಿಯು ದಿನಾಂಕ: 30.12.2004ಕ್ಕೆ ಮುಕ್ತಾಯಗೊಂಡಿದ್ದು ಸದರಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಗುತ್ತಿಗೆ ಸೇವೆಯನ್ನು ಇನ್ನೂ ಒಂದು ವರ್ಷದ ಅವಧಿಗೆ ಮುಂದುವರಿಸಿ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಗುತ್ತಿಗೆ ಆಧಾರದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಸೇವೆಯನ್ನು ಇನ್ನೂ ಒಂದು ವರ್ಷಕ್ಕೆ ಮುಂದುವರಿಸಲು ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 195 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನಲೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ 184 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳ ಸೇವೆಯನ್ನು ದಿನಾಂಕ: 30.12.2004 ರಿಂದ ಒಂದು ವರ್ಷದವರೆಗೆ ಗುತ್ತಿಗೆ ಸೇವೆಯಲ್ಲಿ ಮುಂದುವರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಜಗದೀಶಯ್ಯ**

ಪಿ.ಆರ್. 666 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಡಾ: ಪಿ. ಆನಂದಕುಮಾರ್, ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಅರಕಲಗೂಡು, ಹಾಸನ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಜಿ:(1) ಮೈವಿ:98: 2001-2002, ದಿನಾಂಕ: 20.12.2004.

**ಪ್ರಸ್ತಾವನೆ:**

ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಡಾ: ಪಿ. ಆನಂದಕುಮಾರ್, ದಂತ ಆರೋಗ್ಯಾಧಿಕಾರಿ, ಇವರು ಸರ್ಕಾರಿ ಸೇವೆಗೆ ಸೇರಿ ದಿನಾಂಕ: 6.9.2000 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ತದನಂತರ ದಿನಾಂಕ: 19.2.2001 ರವರೆಗೆ ಕರ್ತವ್ಯ ನಿರ್ವಹಿಸಿ ನಂತರ ಅನಧಿಕೃತ ಗೈರುಹಾಜರಾಗಿರುತ್ತಾರೆ. ಸದರಿ ವೈದ್ಯರಿಗೆ ಕರ್ತವ್ಯಕ್ಕೆ ಮರುಹಾಜರಾಗಲು ಮೂರುಬಾರಿ ಕರೆನೋಟೀಸ್ ನೀಡಿದ್ದಾಗ್ಯೂ ಸದರಿ ಅಧಿಕಾರಿಯು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ತದನಂತರ ದಿನಾಂಕ: 19.12.2003 ರಲ್ಲಿ ದೋಷರೋಪಣೆ ಪಟ್ಟಿಯೊಂದಿಗೆ ತಿಳುವಳಿಕೆ ಪತ್ರವನ್ನು ವೈದ್ಯರಿಗೆ ಜಾರಿಗೊಳಿಸಲಾಗಿತ್ತು. ವೈದ್ಯರು ನೀಡಿರುವ ರಕ್ಷಣಾ ಹೇಳಿಕೆಯಲ್ಲಿ ಅನಾರೋಗ್ಯದ ಕಾರಣದಿಂದಾಗಿ ಕರ್ತವ್ಯಕ್ಕೆ ಹಾಜರಾಗಿಲ್ಲವೆಂದು ವೈದ್ಯರಿಂದ ಔಷಧೋಪಚಾರ ಪಡೆದು ಗುಣಮುಖರಾದ ನಂತರ ಕರ್ತವ್ಯಕ್ಕೆ ಹಾಜರಾಗುವುದಾಗಿ ತಿಳಿಸಿರುತ್ತಾರೆ. ವೈದ್ಯರ ಹೇಳಿಕೆಯನ್ನು ಪರಿಶೀಲಿಸಿ ಅವರ ರಕ್ಷಣಾ ಹೇಳಿಕೆ ತೃಪ್ತಿಕರವಿಲ್ಲವೆಂದು ತೀರ್ಮಾನಿಸಿ, ಡಾ: ಪಿ. ಆನಂದಕುಮಾರ್, ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ ಅರಕಲಗೂಡು, ಹಾಸನ ಜಿಲ್ಲೆ ಇವರು ಸರ್ಕಾರಿ ಸೇವೆಯಲ್ಲಿ ಅನಧಿಕೃತ ಗೈರುಹಾಜರಿ ಇದ್ದು ಅವರ ಸೇವೆಯು ತೃಪ್ತಿಕರವಾಗಿರುವುದಿಲ್ಲವೆಂದು ತಿಳಿಸಿ, ಸದರಿ ವೈದ್ಯರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ ಸೇವಾವಧಿ) ನಿಯಮಗಳು 1977ರ ನಿಯಮ 6(1) (2)ರ ಅಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿಯವರನ್ನು ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 03 ಹೆಚ್‌ಎಸ್‌ಡಿ 2005, ಬೆಂಗಳೂರು, ದಿನಾಂಕ: 16ನೇ ಏಪ್ರಿಲ್ 2005**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಡಾ: ಪಿ. ಆನಂದಕುಮಾರ್, ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಅರಕಲಗೂಡು, ಹಾಸನ ಜಿಲ್ಲೆ ಇವರು ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಗೈರುಹಾಜರಿಯಾಗಿದ್ದರಿಂದ ಸದರಿಯವರನ್ನು ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ಉಪ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಜಗದೀಶಯ್ಯ**

ಪಿ.ಆರ್. 667 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅಧಿಕೃತ ಜ್ಞಾಪನ**

**ಸಂಖ್ಯೆ: ಆಕುಕ 399 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2005**

**ವಿಷಯ:** 2005-06ನೇ ಸಾಲಿಗೆ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಸೇವಾನಿರತ ವೈದ್ಯರನ್ನು ಆಯ್ಕೆ ಮಾಡುವ ಬಗ್ಗೆ.

ಕರ್ನಾಟಕ ವೈದ್ಯಕೀಯ ಕಾಲೇಜುಗಳು ಮತ್ತು ದಂತ ಕಾಲೇಜುಗಳು (ಸ್ನಾತಕೋತ್ತರ ಕೋರ್ಸುಗಳಿಗೆ ಆಯ್ಕೆ) ನಿಯಮಗಳು 1987ರ ಪ್ರಕಾರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಮತ್ತು ಸ್ವಾಯತ್ತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸೇವಾ ನಿರತ ವೈದ್ಯರುಗಳು 2005-06ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿ ಸಲ್ಲಿಸಿ, ಕುಲಸಚಿವರು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೆಂಗಳೂರು, ಇವರ ಆಯ್ಕೆ ಪಟ್ಟಿಯಂತೆ ಹಾಗೂ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಶಿಫಾರಸ್ಸಿನಂತೆ ಈ ಆದೇಶದ ಅನುಬಂಧದಲ್ಲಿರುವ ಅವರ ಹೆಸರಿನ ಮುಂದೆ ನಮೂದಿಸಿರುವ ಕೋರ್ಸು ಮತ್ತು ಕಾಲೇಜುಗಳಿಗೆ ಆಯ್ಕೆ ಮಾಡಲಾಗಿದೆ.

2. ಕರ್ನಾಟಕ ಸರ್ಕಾರಿ ಸೇವಾ ನಿಯಮ 7ರ ಅನುಬಂಧ-1 ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸೇವಾನಿರತ ವೈದ್ಯರುಗಳಿಗೆ ಪ್ರತಿನಿಯೋಜನಾ ಸೌಲಭ್ಯವಿರುತ್ತದೆ. ಪ್ರಥಮ ಬಾರಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾ

ನಿರತ ವೈದ್ಯರುಗಳು ಅವರುಗಳು ಆಯ್ಕೆ ಮಾಡಿರುವ ಕೋರ್ಸು ಮತ್ತು ಕಾಲೇಜಿನಲ್ಲಿ ಆಯ್ಕೆಯಾಗಿರುವ ವೈದ್ಯಾಧಿಕಾರಿಗಳು ಅಫಿಡವಿಟ್ ಫಾರಂ-ಎ ಯನ್ನು ಭರ್ತಿ ಮಾಡಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಸಲ್ಲಿಸತಕ್ಕದ್ದು.

3. ಅಲ್ಲದೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಮತ್ತು ಸಂಬಂಧಿಸಿದ ಮೇಲಾಧಿಕಾರಿಗಳು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ನಮೂನೆ-19 ಅಥವಾ 19ಎ ರನ್ವಯ ಬಾಂಡ್ ಅನ್ನು ಪಡೆಯುವುದು.

4. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಅಥವಾ ಸಂಬಂಧಿಸಿದ ಮೇಲಾಧಿಕಾರಿಗಳು ಅಫಿಡವಿಟ್ ಮತ್ತು ಬಾಂಡ್‌ಗಳನ್ನು ಪಡೆದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರಿಗೆ ಕಳುಹಿಸತಕ್ಕದ್ದು. ಯಾವುದೇ ಕಾರಣಕ್ಕೂ ಮೇಲಿನ ದಾಖಲಾತಿಗಳನ್ನು ಪಡೆಯದೇ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಅಭ್ಯರ್ಥಿಗಳನ್ನು ಪ್ರಸ್ತುತ ಕರ್ತವ್ಯದಿಂದ ಬಿಡುಗಡೆ ಮಾಡಿದಲ್ಲಿ ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ : ಮೇಲಾಧಿಕಾರಿಗಳು ಸರ್ಕಾರ ತೆಗೆದುಕೊಳ್ಳುವ ಕ್ರಮಕ್ಕೆ ನೇರ ಹೊಣೆಗಾರರಾಗುತ್ತಾರೆ.

5. ಈ ಅಧಿಕೃತ ಜ್ಞಾಪನದ ಅನುಬಂಧದಲ್ಲಿ ತಿಳಿಸಿರುವ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ವೈದ್ಯರು ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ನಂತರ ಸರ್ಕಾರ ಪರಿಶೀಲಿಸಿ ಪ್ರತ್ಯೇಕವಾಗಿ ವ್ಯಾಸಂಗದ ರಜೆ ಅಥವಾ ಪ್ರತಿನಿಯೋಜನಾ ರಿಯಾಯಿತಿ ಸೌಲಭ್ಯ ಮಂಜೂರು ಮಾಡಲು ಕ್ರಮ ತೆಗೆದುಕೊಳ್ಳುವುದು. ಸ್ನಾತಕೋತ್ತರ ಕೋರ್ಸಿನ ಪ್ರವೇಶ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ಇಲ್ಲದೇ ಈ ಅಭ್ಯರ್ಥಿಗಳು ವೇತನ : ರಜೆಯ ವೇತನ ಪಡೆಯಲು ಅವಕಾಶವಿರುವುದಿಲ್ಲ.

6. ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿರುವ ಸೇವಾನಿರತ ವೈದ್ಯರುಗಳ ವೇತನ ಹಾಗೂ ನಿಯೋಜನೆ ಭತ್ಯೆ ಬಟವಾಡೆ ಮಾಡುವ ಅಧಿಕಾರವನ್ನು ಅವರನ್ನು ನಿಯೋಜಿಸಿರುವ ಕಾಲೇಜಿಗೆ ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಶಸ್ತ್ರ ಚಿಕಿತ್ಸಕರು : ಸರ್ಕಾರಿ ಕಾಲೇಜಿನ ಪ್ರಾಂಶುಪಾಲರು : ಪ್ರಾಂಶುಪಾಲರು, ಆಕುಕ ತರಬೇತಿ ಕೇಂದ್ರ : ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರುಗಳಿಗೆ ನೀಡಲಾಗಿದೆ.

7. ಈ ಅಧಿಕೃತ ಜ್ಞಾಪನದ ಅನುಬಂಧದಲ್ಲಿ ತಿಳಿಸಿರುವ 2005-06ನೇ ಸಾಲಿನಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸೇವಾ ನಿರತ ವೈದ್ಯರು ಸಂಬಂಧಪಟ್ಟ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆಯಲು ಕೊನೆಯ ದಿನಾಂಕ: 30.4.2005 ಆಗಿರುತ್ತದೆ. ಸದರಿ ಆಯ್ಕೆಗೊಂಡ ಸೇವಾನಿರತ ವೈದ್ಯರು ಸ್ನಾತಕೋತ್ತರ ಕೋರ್ಸು ಪ್ರಾರಂಭವಾಗುವವರೆಗೆ ಯಾವ ಸ್ಥಳದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆಯೋ ಆ ಜಾಗದಲ್ಲಿ ಮುಂದುವರಿಯುವುದು ಹಾಗೂ ತದನಂತರ ಕರ್ತವ್ಯದಿಂದ ಬಿಡುಗಡೆಗೊಳ್ಳತಕ್ಕದ್ದು. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹಾಗೂ ಸಂಬಂಧಿಸಿದ ಮೇಲಾಧಿಕಾರಿಗಳು ಅದರಂತೆ ಕ್ರಮ ತೆಗೆದುಕೊಳ್ಳಬೇಕೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಶಂಕರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅಧಿಕೃತ ಜ್ಞಾಪನ ಸಂಖ್ಯೆ: ಆಕುಕ 399 ಹೆಚ್ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 29.04.2005ಕ್ಕೆ**

**ಅನುಬಂಧ**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ವೈದ್ಯಾಧಿಕಾರಿಗಳನ್ನು 2005-06ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗದ ಆಯ್ಕೆಗೆ ನಡೆದ ಸ್ಥಳ ಸಂದರ್ಶನದಲ್ಲಿ ಆಯ್ಕೆಯಾಗಿರುವ ಸೇವಾನಿರತ ವೈದ್ಯಾಧಿಕಾರಿಗಳ ವಿವರ:

| ಕ್ರಮ ಸಂಖ್ಯೆ | ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ | ಸೇವಾನಿರತ ವೈದ್ಯರ ಹೆಸರು ಮತ್ತು ಕಾರ್ಯನಿರ್ವಹಿಸುತ್ತಿರುವ ಸ್ಥಳ | ವೈದ್ಯರುಗಳು ಆಯ್ಕೆಯಾಗಿರುವ | | |
|---|---|---|---|---|---|
| | | | ವಿಷಯ | ವೈದ್ಯಕೀಯ ಮಹಾವಿದ್ಯಾಲಯ | ಆಯ್ಕೆ ಮಾಡಿರುವ ವರ್ಗ |
| 1 | 2 | 3 | 4 | 5 | 6 |
| 1. | 25 | ಡಾ: ವಿಜಯಲಕ್ಷ್ಮೀ ಬಿ.ಸಿ.<br>ಸೇಠ್ ತುಳಸೀದಾಸ್ ಮೋಹನ್‌ದಾಸ್ ಆಸ್ಪತ್ರೆ, ಮೈಸೂರು. | ಎಂಡಿ (ಅನಸ್ತೇ) | ಎಂಎಂಸಿ, ಮೈಸೂರು | ಜಿಎಂ |
| 2. | 30 | ಡಾ: ಪದ್ಮಜಾ ಎ.,<br>ಪ್ರಾ.ಆ.ಕೇಂದ್ರ, ಊರ್ಡಿಗೆರೆ, ತುಮಕೂರು ಜಿಲ್ಲೆ. | ಎಂಡಿ (ಅನಸ್ತೇ) | ಜೆಜೆಎಂಡಿ, ದಾವಣಗೆರೆ | ಜಿಎಂ |
| 3. | 44 | ಡಾ: ಬಾಲಚಂದ್ರ ಗಿರಿಯಾ ಮೇಸ್ತಾ,<br>ಪ್ರಾ.ಆ.ಕೇಂದ್ರ, ಬನವಾಸಿ, ಶಿರಸಿ ತಾಲ್ಲೂಕು, ಉ.ಕ.ಜಿಲ್ಲೆ. | ಎಂಡಿ (ಅನಸ್ತೇ) | ಕೆಎಂಸಿ, ಮಂಗಳೂರು | ಜಿಎಂ |
| 4. | 59 | ಡಾ: ಲೋಕೇಶ್ವರಿ ಕೆ.ಎಲ್.,<br>ಪ್ರಾ.ಆ.ಕೇಂದ್ರ, ಗರ್ಗೇಶ್ವರಿ, ಮೈಸೂರು ಜಿಲ್ಲೆ. | ಎಂಡಿ (ಅನಸ್ತೇ) | ಜೆಎಸ್‌ಎಸ್, ಮೈಸೂರು | ಜಿಎಂ |
| 5. | 80 | ಡಾ: ಬಸವಯ್ಯ,<br>ಪ್ರಾ.ಆ.ಕೇಂದ್ರ, ಎನ್ ಬೆಳತ್ತೂರು, ಹೆಚ್.ಡಿ.ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ. | ಎಂಡಿ (ಅನಸ್ತೇ) | ಕಿಮ್ಸ್, ಹುಬ್ಬಳ್ಳಿ | ಎಸ್‌ಸಿ |
| 6. | 75 | ಡಾ: ನಾಗರಾಜ ಹೆಚ್.ಜಿ.,<br>ಸ.ಆ.ಕೇಂದ್ರ, ಪಾಲಿಬೆಟ್ಟ, ಕೊಡಗು ಜಿಲ್ಲೆ. | ಎಂಡಿ (ಎಫ್‌ಎಂ) | ಆಲ್ ಅಮೀನ್ ಮೆಡಿಕಲ್ ಕಾಲೇಜ್, ಬಿಜಾಪುರ | ಜಿಎಂ |
| 7. | 13 | ಡಾ: ಶ್ರೀಧರ ಸಿ.ಜಿ.,<br>ಪ್ರಾ.ಆ. ಕೇಂದ್ರ, ಹಂದನಕೆರೆ, ತುಮಕೂರು ಜಿಲ್ಲೆ. | ಎಂಡಿ (ಜಿಎಂ) | ಬಿಎಂಸಿ, ಬೆಂಗಳೂರು | ಜಿಎಂ |

| 1 | 2 | 3 | 4 | 5 | 6 |
|---|---|---|---|---|---|
| 8. | 19 | ಡಾ: ಶಿವಪ್ಪ ಡಿ.ಆರ್., ಪ್ರಾ.ಆ. ಕೇಂದ್ರ, ಸೂಲಿಬೆಲೆ, ಹೊಸಕೋಟೆ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ. | ಎಂಡಿ (ಜಿಎಂ) | ಡಿಯುಎಂಸಿ, ಕೋಲಾರ | ಜಿಎಂ |
| 9. | 20 | ಡಾ: ಗಿರೀಶ್ ಎಸ್., ಪ್ರಾ.ಆ. ಘಟಕ, ಕುಂದೂರು, ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. | ಎಂಡಿ (ಜಿಎಂ) | ಕೆಎಂಸಿ, ಮಂಗಳೂರು | ಜಿಎಂ |
| 10. | 33 | ಡಾ: ರಾಜೀವ್ ಎಲ್.ಕೆ., ಪ್ರಾ.ಆ.ಕೇಂದ್ರ, ಹುಣಸೆಘಟ್ಟ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. | ಎಂಡಿ (ಜಿಎಂ) | ಜೆಜೆಎಂಸಿ, ದಾವಣಗೆರೆ | ಜಿಎಂ |
| 11. | 35 | ಡಾ: ಅಬ್ದುಲ್ ಅಜೀಜ್ ಎ.ಎಂ., ಪ್ರಾ.ಆ.ಕೇಂದ್ರ, ವಿಟ್ಲ, ಬಂಟ್ವಾಳ ತಾಲ್ಲೂಕು, ದ.ಕ.ಜಿಲ್ಲೆ. | ಎಂಡಿ (ಜಿಎಂ) | ಜೆಎಸ್ಎಸ್, ಮೈಸೂರು | ಜಿಎಂ |
| 12. | 36 | ಡಾ: ಅನಿಲ್ ಎಸ್., ಪ್ರಾ.ಆ.ಘಟಕ, ದೊಡ್ಡ ಎಕ್ಕುಂದಿ, ಬೆಂಗಳೂರು ನಗರ ಜಿಲ್ಲೆ. | ಎಂಡಿ (ಜಿಎಂ) | ಜೆಎನ್ಎಂಸಿ, ಬೆಳಗಾಂ | ಜಿಎಂ |
| 13. | 49 | ಡಾ: ಜಗದೀಶ್‌ಚಂದ್ರ ಎಸ್. ಬೆನ್ನೂರ್, ಪ್ರಾ.ಆ.ಕೇಂದ್ರ, ಕಡಗಂಚಿ, ಆಳಂದ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. | ಎಂಡಿ (ಜಿಎಂ) | ಅಲ್ ಅಮೀನ್ ಮೆಡಿಕಲ್ ಕಾಲೇಜ್, ಬಿಜಾಪುರ | ಜಿಎಂ |
| 14. | 53 | ಡಾ: ಶ್ರೀನಿವಾಸ ನಾಯಕ್, ಪ್ರಾ.ಆ.ಘಟಕ, ಹನಕೌನ್, ಕಾರವಾರ ಜಿಲ್ಲೆ. | ಎಂಡಿ (ಜಿಎಂ) | ಬಿಎಲ್‌ಡಿಇಎ, ಬಿಜಾಪುರ | ಜಿಎಂ |
| 15. | 78 | ಡಾ: ಪ್ರಕಾಶ್, ಡಿ., ಪ್ರಾ.ಆ.ಕೇಂದ್ರ, ಉಚ್ಚಂಗಿದುರ್ಗ, ದಾವಣಗೆರೆ ಜಿಲ್ಲೆ. | ಎಂಡಿ (ಜಿಎಂ) | ಜೆಜೆಎಂಸಿ, ದಾವಣಗೆರೆ. | ಎಸ್‌ಸಿ |
| 16. | 79 | ಡಾ: ವಿಜಯಕುಮಾರ ಎಂ., ಟಿ.ಬಿ. ಆಸ್ಪತ್ರೆ, ಮೂಡಶೆಡ್, ಮಂಗಳೂರು ಜಿಲ್ಲೆ, | ಎಂಡಿ (ಜಿಎಂ) | ಎಂಎಂಸಿ, ಮೈಸೂರು. | ಎಸ್‌ಟಿ |
| 17. | 82 | ಡಾ: ರಾಜು ಆರ್., ಪ್ರಾ.ಆ. ಕೇಂದ್ರ, ಹಿರೇಕೊಗಲೂರು, ದಾವಣಗೆರೆ ಜಿಲ್ಲೆ, | ಎಂಡಿ (ಜಿಎಂ) | ಎಂಎಸ್ ರಾಮಯ್ಯ, ಬೆಂಗಳೂರು. | ಎಸ್‌ಸಿ |
| 18. | 103 | ಡಾ: ದಿವಾಕರ ಕೆ.ಹೆಚ್., ಪ್ರಾ.ಆ.ಕೇಂದ್ರ, ಬೆಳಗೊಳ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿಲ್ಲೆ. | ಎಂಡಿ (ಜಿಎಂ) | ಸೇಂಟ್‌ಜಾನ್ಸ್ ಮೆಡಿಕಲ್ ಕಾಲೇಜ್, ಬೆಂಗಳೂರು | ಜಿಎಂ |
| 19. | 86 | ಡಾ: ಸುನಿತ ವಿ., ಆರೋಗ್ಯ ಕೇಂದ್ರ ಬಾಪೂಜಿನಗರ, ಅಂಗಳಯ್ಯನಕೆರೆ, ಶಿವಮೊಗ್ಗ ಜಿಲ್ಲೆ. | ಎಂಡಿ (ಮೈಕ್ರೋ) | ಜೆಜೆಎಂಸಿ, ದಾವಣಗೆರೆ | ಜಿಎಂ |
| 20. | 112 | ಡಾ: ಜ್ಞಾನೇಶ್ವರ ಕೆ.ಬಿ., ಸಿಜಿ ಆಸ್ಪತ್ರೆ, ದಾವಣಗೆರೆ. | ಎಂಡಿ (ಮೈಕ್ರೋ) | ಎಂಎಂಸಿ, ಮೈಸೂರು | ಜಿಎಂ |
| 21. | 5 | ಡಾ: ಅಶೋಕ ಹೆಚ್.ಎನ್., ಪ್ರಾ.ಆ. ಕೇಂದ್ರ, ಶಿರವಾಸೆ, ಚಿಕ್ಕಮಗಳೂರು ಜಿಲ್ಲೆ. | ಎಂಡಿ (ಪೀಡಿಯಾ) | ಬಿಎಂಸಿ, ಬೆಂಗಳೂರು | ಜಿಎಂ |
| 22. | 7 | ಡಾ: ಹರೀಶ್ ಬಾಬು ಜಿ.ಎ., ಪ್ರಾ.ಆ. ಕೇಂದ್ರ, ಗೌನಿಪಲ್ಲಿ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ. | ಎಂಡಿ (ಪೀಡಿಯಾ) | ಎಂಎಸ್ ರಾಮಯ್ಯ, ಬೆಂಗಳೂರು | ಜಿಎಂ |
| 23. | 11 | ಡಾ: ಚಿಕ್ಕನರಸಾರೆಡ್ಡಿ ಪಿಎಸ್., ಸಾರ್ವಜನಿಕ ಆಸ್ಪತ್ರೆ, ಪಾವಗಡ, ತುಮಕೂರು ಜಿಲ್ಲೆ. | ಎಂಡಿ (ಪೀಡಿಯಾ) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 24. | 22 | ಡಾ: ಚಂಪಕಮಾಲಿನಿ ಎಸ್. ಮಾವಿನತೋಪ್ ಸಾರ್ವಜನಿಕ ಆಸ್ಪತ್ರೆ, ಹಿರೇಕೆರೂರು, ಹಾವೇರಿ ಜಿಲ್ಲೆ. | ಎಂಡಿ (ಪೀಡಿಯಾ) | ವಿಮ್ಸ್, ಬಳ್ಳಾರಿ | ಜಿಎಂ |
| 25. | 58 | ಡಾ: ನಿಂಗಪ್ಪ ಬನ್ನಿಗಿಡದ್, ಸಾರ್ವಜನಿಕ ಆಸ್ಪತ್ರೆ, ರಾಮದುರ್ಗ, ಬೆಳಗಾಂ ಜಿಲ್ಲೆ. | ಎಂಡಿ (ಪೀಡಿಯಾ) | ಇಂದಿರಾಗಾಂಧಿ ಇನ್ಸ್‌ಟಿಟ್ಯೂಟ್ ಆಫ್ ಚೈಲ್ಡ್ ಹೆಲ್ತ್, ಬೆಂಗಳೂರು | ಎಸ್‌ಸಿ |
| 26. | 32 | ಡಾ: ಶಿವಶಂಕರ್ ಪಿ., ರಕ್ತ ನಿಧಿ ಕೇಂದ್ರ, ಜಿಲ್ಲಾ ಆಸ್ಪತ್ರೆ, ಚಾಮರಾಜನಗರ. | ಎಂಡಿ (ಪೆಥಾಲಜಿ) | ಜೆಎಸ್ಎಸ್, ಮೈಸೂರು | ಜಿಎಂ |

| 1 | 2 | 3 | 4 | 5 | 6 |
|---|---|---|---|---|---|
| 27. | 71 | ಡಾ: ಗಾಯಿತ್ರಿ ಆರ್.ಕೆ., ಪ್ರಾ.ಆ.ಘಟಕ, ಕಗ್ಗತ್ತೂರು, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ. | ಎಂಡಿ (ಪೆಥಾಲಜಿ) | ಕಿಮ್ಸ್, ಹುಬ್ಬಳ್ಳಿ | ಜಿಎಂ |
| 28. | 109 | ಡಾ: ಶಿವಕುಮಾರ ಸ್ವಾಮಿ ಉದಾಸಿಮಠ್, ಪ್ರಾ.ಆ.ಕೇಂದ್ರ, ಚಿಕ್ಕಬಾಸೂರು, ಬ್ಯಾಡಗಿ ತಾಲ್ಲೂಕು, ಹಾವೇರಿ ಜಿಲ್ಲೆ. | ಎಂಡಿ (ಪೆಥಾಲಜಿ) | ಬಿಎಲ್‌ಡಿಇಎ, ಬಿಜಾಪುರ | ಜಿಎಂ |
| 29. | 119 | ಡಾ: ಶೀಲಾ ಎಂ.ಎಸ್., ಪ್ರಾ.ಆ. ಘಟಕ, ಚಿಕ್ಕಬ್ಯಾಡರಹಳ್ಳಿ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ. | ಎಂಡಿ (ಪೆಥಾಲಜಿ) | ಜೆಜೆಎಂಸಿ, ಮೈಸೂರು | ಎಸ್‌ಸಿ |
| 30. | 3 | ಡಾ: ಮೈತ್ರೀಶಾ, ಪ್ರಾ.ಆ. ಕೇಂದ್ರ, ಕೊಯಿರಾ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ. | ಎಂಡಿ (ಆರ್‌ಡಿ) | ಬಿಎಂಸಿ, ಬೆಂಗಳೂರು. | ಜಿಎಂ |
| 31. | 6 | ಡಾ: ಈರಣ್ಣ ರುದ್ರಪ್ಪ ಪಲ್ಲೇದ್, ನಗರ ಕುಟುಂಬ ಕಲ್ಯಾಣ ಕೇಂದ್ರ, ಗುಲ್ಬರ್ಗಾ ಜಿಲ್ಲೆ. | ಎಂಡಿ (ಆರ್‌ಡಿ) | ಜೆಎನ್‌ಎಂಸಿ, ಬೆಳಗಾಂ. | ಜಿಎಂ |
| 32. | 9 | ಡಾ: ಸವಿತಾ ಡಿ., ಎನ್‌ಎಲ್‌ಸಿಡಿ, ಆಕುಕ ತರಬೇತಿ ಕೇಂದ್ರ, ಹುಬ್ಬಳ್ಳಿ. | ಎಂಡಿ (ಸ್ಕಿನ್) | ವಿಮ್ಸ್, ಬಳ್ಳಾರಿ | ಜಿಎಂ |
| 33. | 57 | ಡಾ: ಬಂಗಾರು ಹೆಚ್., ಜಿಲ್ಲಾ ಕ್ಷಯಾ ರೋಗ ನಿಯಂತ್ರಣ ಅಧಿಕಾರಿ, ಚಾಮರಾಜನಗರ. | ಎಂಡಿ (ಸ್ಕಿನ್) | ಜೆಜೆಎಂಸಿ, ದಾವಣಗೆರೆ | ಜಿಎಂ |
| 34. | 76 | ಡಾ: ಸುರೇಂದ್ರನ್, ಕೆ.ಎ.ಕೆ. ಪ್ರಾ.ಆ. ಕೇಂದ್ರ, ಪಡಗೂರು, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ. | ಎಂಡಿ (ಸ್ಕಿನ್) | ಫಾದರ್ ಮುಲ್ಲರ್ ಮೆಡಿಕಲ್ ಕಾಲೇಜ್, ಮಂಗಳೂರು. | ಜಿಎಂ |
| 35. | 60 | ಡಾ: ಶಿವಕುಮಾರ್ ಕೆ.ಬಿ., ಪ್ರಾ.ಆ. ಕೇಂದ್ರ, ಕೆರೆಗೋಡ್, ಮಂಡ್ಯ ಜಿಲ್ಲೆ. | ಎಂಎಸ್ (ಇಎನ್‌ಟಿ) | ಬಿಎಂಸಿ, ಬೆಂಗಳೂರು | ಜಿಎಂ |
| 36. | 93 | ಡಾ: ಚಂದನ್ ಜಿ.ಬಿ., ಪ್ರಾ.ಆ.ಕೇಂದ್ರ, ಕೆಸ್ತೂರು, ತುಮಕೂರು ಜಿಲ್ಲೆ. | ಎಂಎಸ್ (ಇಎನ್‌ಟಿ) | ವಿಮ್ಸ್, ಬಳ್ಳಾರಿ. | ಜಿಎಂ |
| 37. | 12 | ಡಾ: ಗಜಾನನ ಶ್ರೀಪಾದ ಭಟ್, ಪ್ರಾ.ಆ. ಕೇಂದ್ರ, ಬಳಕೂರು, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. | ಎಂಎಸ್ (ಜಿಎಸ್) | ಕಿಮ್ಸ್, ಹುಬ್ಬಳ್ಳಿ. | ಜಿಎಂ |
| 38. | 27 | ಡಾ: ರವೀಂದ್ರ ಕುಮಾರ್ ಟಿ.ಎಂ., ಪ್ರಾ.ಆ. ಕೇಂದ್ರ, ಕನ್ನಹೊಸಹಳ್ಳಿ, ಕೂಡ್ಲಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ. | ಎಂಎಸ್ (ಜಿಎಸ್) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 39. | 29 | ಡಾ: ಜುಬೇರ್ ಅಹ್ಮದ್ ಕೆ., ಪ್ರಾ.ಆ. ಕೇಂದ್ರ, ದೇವಸಮುದ್ರ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ. | ಎಂಎಸ್ (ಜಿಎಸ್) | ಎಂಎಂಸಿ, ಮೈಸೂರು. | ಜಿಎಂ |
| 40. | 37 | ಡಾ: ಶಿವಪ್ರಕಾಶ್ ಡಿ.ಎಸ್., ಪ್ರಾ.ಆ. ಕೇಂದ್ರ, ಕಪ್ಪನಹಳ್ಳಿ, ಶಿಕಾರಿಪುರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಎಂಎಸ್ (ಜಿಎಸ್) | ಜೆಎಸ್‌ಎಸ್, ಮೈಸೂರು. | ಜಿಎಂ |
| 41. | 38 | ಡಾ: ಅನಿಲ್ ಕುಮಾರ್ ಎಂ ತಲ್‌ವಾಡೆ, ಸಾರ್ವಜನಿಕ ಆಸ್ಪತ್ರೆ, ಭಾಲ್ಕಿ, ಬೀದರ್ ಜಿಲ್ಲೆ. | ಎಂಎಸ್ (ಜಿಎಸ್) | ಬಿಎಂಸಿ, ಬೆಂಗಳೂರು. | ಜಿಎಂ |
| 42. | 41 | ಡಾ: ಅಮರಪ್ಪ ಪರಮಣ್ಣ, ಪ್ರಾ.ಆ. ಕೇಂದ್ರ, ಮಣ್ಣೂರು, ಅಫ್‌ಜಲ್‌ಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. | ಎಂಎಸ್ (ಜಿಎಸ್) | ಎಂಎಸ್ ರಾಮಯ್ಯ ಮೆಡಿಕಲ್ ಕಾಲೇಜ್, ಬೆಂಗಳೂರು. | ಜಿಎಂ |
| 43. | 69 | ಡಾ: ಮುರಳೀಧರ ಬಿ.ಆರ್., ಪ್ರಾ.ಆ. ಘಟಕ, ಶ್ರೀನಿವಾಸಪುರ, ಚನ್ನರಾಯಪಟ್ಟಣ, ಹಾಸನ ಜಿಲ್ಲೆ. | ಎಂಎಸ್ (ಜಿಎಸ್) | ಜೆಎನ್‌ಎಂಸಿ, ಬೆಳಗಾಂ. | ಜಿಎಂ |
| 44. | 72 | ಡಾ: ಮಹೇಶ್ ಬಾಳಪ್ಪ ಕೋಣಿ, ಪ್ರಾ.ಆ. ಕೇಂದ್ರ, ಬೆಟಗೇರಿ, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ. | ಎಂಎಸ್ (ಜಿಎಸ್) | ಫಾದರ್ ಮುಲ್ಲರ್ ಮೆಡಿಕಲ್ ಕಾಲೇಜ್, ಮಂಗಳೂರು. | ಜಿಎಂ |

| 1 | 2 | 3 | 4 | 5 | 6 |
|---|---|---|---|---|---|
| 45. | 77 | ಡಾ: ರಾಜಕುಮಾರ್ ನಾಯಕ್ ಜಿ., ಪ್ರಾ.ಆ. ಘಟಕ, ಬನುವಳ್ಳಿ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ. | ಎಂಎಸ್ (ಜಿಎಸ್) | ವಿಮ್ಸ್, ಬಳ್ಳಾರಿ. | ಎಸ್‌ಸಿ |
| 46. | 81 | ಡಾ: ವಿಶ್ವನಾಥ್ ಜಾಜು ರೇವಣಕರ್ | ಎಂಎಸ್ (ಜಿಎಸ್) | ಬಿಎಲ್‌ಡಿಇಎ, ಬಿಜಾಪುರ. | ಎಸ್‌ಸಿ |
| 47. | 95 | ಡಾ: ವಾಸಿಂ ಇಮ್ರಾನ್, ಪ್ರಾ.ಆ. ಕೇಂದ್ರ, ಹೊಳವನಹಳ್ಳಿ, ತುಮಕೂರು ಜಿಲ್ಲೆ. | ಎಂಎಸ್ (ಜಿಎಸ್) | ಸೇಂಟ್ ಜಾನ್ಸ್ ಮೆಡಿಕಲ್ ಕಾಲೇಜ್, ಬೆಂಗಳೂರು. | ಜಿಎಂ |
| 48. | 115 | ಡಾ: ಮುರಳೀಧರ್ ಆರ್. ದೊಡ್ಡಮನಿ, ಸ.ಆ.ಕೇಂದ್ರ, ಸಂತೇಬೆನ್ನೂರು, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ. | ಎಂಎಸ್ (ಜಿಎಸ್) | ಡಿಯುಎಂಸಿ, ಕೋಲಾರ | ಎಸ್‌ಟಿ |
| 49. | 8 | ಡಾ: ಸುನಿತಾ ಕೆ.ಎಸ್., ಇಂಡಿಯನ್ ಪಾಪುಲೇಷನ್ ಕಾಲೇಜ್, 8ನೇ ಶಾಂತಿನಗರ, ಎಂಸಿಸಿ, ಮೈಸೂರು ಜಿಲ್ಲೆ. | ಎಂಎಸ್ (ಓಬಿಜಿ) | ಬಿಎಂಸಿ, ಬೆಂಗಳೂರು. | ಜಿಎಂ |
| 50. | 10 | ಡಾ: ಮಂಜುಳಾ ಈ., ಪ್ರಾ.ಆ. ಕೇಂದ್ರ, ಐರಗಂಪನಹಳ್ಳಿ, ಚಿಂತಾಮಣಿ ತಾಲ್ಲೂಕು, ಕೋಲಾರ ಜಿಲ್ಲೆ. | ಎಂಎಸ್ (ಓಬಿಜಿ) | ಎಂಎಸ್ ರಾಮಯ್ಯ, ಬೆಂಗಳೂರು | ಜಿಎಂ |
| 51. | 16 | ಡಾ: ಫೈರು ಜಗನ್ನಾಥ್, ಸಾರ್ವಜನಿಕ ಆಸ್ಪತ್ರೆ, ಶಿಡ್ಲಘಟ್ಟ, ಕೋಲಾರ ಜಿಲ್ಲೆ. | ಎಂಎಸ್ (ಓಬಿಜಿ) | ಸಿದ್ದಾರ್ಥ ವೈದ್ಯಕೀಯ ಮಹಾ ವಿದ್ಯಾಲಯ, ತುಮಕೂರು. | ಜಿಎಂ |
| 52. | 21 | ಡಾ: ವೀಣಾ ಎಂ.ಎಸ್., ಪ್ರಾ.ಆ.ಘಟಕ, ರಾಮಪುರ ಎಲೆಕ್ಟ್ರಿಕ್ ಕಾಲೋನಿ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ. | ಎಂಎಸ್ (ಓಬಿಜಿ) | ಕಿಮ್ಸ್, ಹುಬ್ಬಳ್ಳಿ. | ಜಿಎಂ |
| 53. | 23 | ಡಾ: ರವಿಕುಮಾರ್ ಬಿ.ಎನ್., ಪ್ರಾ.ಆ. ಘಟಕ, ಆದಿವಾಲ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ. | ಎಂಎಸ್ (ಓಬಿಜಿ) | ವಿಮ್ಸ್, ಬಳ್ಳಾರಿ. | ಜಿಎಂ |
| 54. | 26 | ಡಾ: ಶಾಲಿನಿ ಡಿ. ಮೆನೆನ್‌ಜಸ್, ಸ.ಆ.ಕೇಂದ್ರ, ಶಿರ್ವಾ, ಉಡುಪಿ ಜಿಲ್ಲೆ. | ಎಂಎಸ್ (ಓಬಿಜಿ) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 55. | 61 | ಡಾ: ಮಂಜುಳಾ ಕೆ., ಸ.ಆ. ಕೇಂದ್ರ, ಬೆಳ್ತಂಗಡಿ, ದ.ಕ. ಜಿಲ್ಲೆ. | ಎಂಎಸ್ (ಓಬಿಜಿ) | ಜೆಎನ್‌ಎಂಸಿ, ಬೆಳಗಾಂ | ಎಸ್‌ಸಿ |
| 56. | 31 | ಡಾ: ಸುರೇಶ್ ಎ.ಆರ್., ಚಿಗಟೇರಿ ಆಸ್ಪತ್ರೆ, ದಾವಣಗೆರೆ. | ಎಂಎಸ್ (ನೇತ್ರ) | ಎಂಎಂಸಿ, ಮೈಸೂರು | ಜಿಎಂ |
| 57. | 56 | ಡಾ: ವಿಜಯನರಸಿಂಹ ಎನ್.ಎಲ್., ಸ.ಆ. ಕೇಂದ್ರ, ವಿಜಯಪುರ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ. | ಎಂಎಸ್ (ನೇತ್ರ) | ಡಿಯುಎಂಸಿ, ಕೋಲಾರ. | ಜಿಎಂ |
| 58. | 70 | ಡಾ: ಜಗದೀಶ್ ಎಸ್ ಗಾಣಿಗಿ, ಪ್ರಾ.ಆ. ಕೇಂದ್ರ, ಗಲಗಲಿ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | ಎಂಎಸ್ (ನೇತ್ರ) | ಜೆಎನ್‌ಎಂಸಿ, ಬೆಳಗಾಂ | ಜಿಎಂ |
| 59. | 1 | ಡಾ: ಮುತ್ತಪ್ಪ ಕೆ.ಬಿ., ಜಿಲ್ಲಾ ಆಸ್ಪತ್ರೆ, ಮಡಿಕೇರಿ. | ಎಂಎಸ್ (ಆರ್ಥೋ) | ಜೆಎಸ್‌ಎಸ್, ಮೈಸೂರು. | ಜಿಎಂ |
| 60. | 24 | ಡಾ: ವಿರೇಶ್ ವೈ ನರೆಗಲ್, ಸಾರ್ವಜನಿಕ ಆಸ್ಪತ್ರೆ, ಶಿರಗುಪ್ಪ, ಬಳ್ಳಾರಿ ಜಿಲ್ಲೆ. | ಎಂಎಸ್ (ಆರ್ಥೋ) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 61. | 55 | ಡಾ: ವೆಂಕಟೇಶ್ ಬಿ.ಸಿ., ಪ್ರಾ.ಆ. ಕೇಂದ್ರ, ಕರೆಹಳ್ಳಿ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ. | ಎಂಎಸ್ (ಆರ್ಥೋ) | ಬಿಎಂಸಿ, ಬೆಂಗಳೂರು | ಎಸ್‌ಸಿ |
| 62. | 74 | ಡಾ: ಶಿಂಧೆ ವಿಠಲ್ ವೆಂಕಟಪ್ಪ, ಪ್ರಾ.ಆ.ಕೇಂದ್ರ, ಅಂಕಲಿ, ಚಿಕ್ಕೋಡಿ ತಾಲ್ಲೂಕು, ಬೆಳಗಾಂ ಜಿಲ್ಲೆ. | ಎಂಎಸ್ (ಆರ್ಥೋ) | ಬಿಎಲ್‌ಡಿಇಎ, ಬಿಜಾಪುರ. | ಜಿಎಂ |

| 1 | 2 | 3 | 4 | 5 | 6 |
|---|---|---|---|---|---|
| 63. | 89 | ಡಾ: ರಾಜಲಕ್ಷ್ಮೀ ಎಸ್.ವಿ., ಸಾರ್ವಜನಿಕ ಆಸ್ಪತ್ರೆ, ಚಿಕ್ಕಬಳ್ಳಾಪುರ ತಾಲ್ಲೂಕು, ಕೋಲಾರ ಜಿಲ್ಲೆ. | ಡಿಎ (ಅರವಳಿಕೆ) | ಬಿಎಂಸಿ, ಬೆಂಗಳೂರು. | ಜಿಎಂ |
| 64. | 97 | ಡಾ: ಸುಧಾಕರ್ ಆರ್.ಸಿ., ಪ್ರಾ.ಆ.ಘಟಕ, ನಗರಗೆರೆ, ಗೌರಿಬಿದನೂರು ತಾಲ್ಲೂಕು, ಕೋಲಾರ ಜಿಲ್ಲೆ. | ಡಿಎ (ಅರವಳಿಕೆ) | ಕಿಮ್ಸ್ ಹುಬ್ಬಳ್ಳಿ. | ಜಿಎಂ |
| 65. | 113 | ಡಾ: ನಿರ್ಮಲಾ ಎಸ್, ಪ್ರಾ.ಆ. ಕೇಂದ್ರ, ಇಂಚಲ್, ಸವದತ್ತಿ ತಾಲ್ಲೂಕು, ಬೆಳಗಾಂ ಜಿಲ್ಲೆ. | ಡಿಎ (ಅರವಳಿಕೆ) | ಜೆಜೆಎಂಸಿ, ದಾವಣಗೆರೆ. | ಜಿಎಂ |
| 66. | 120 | ಡಾ: ಪುಷ್ಪಲತಾ ಎಸ್ ಸುಣ್ಣದಕಲ್., ಪ್ರಾ.ಆ. ಕೇಂದ್ರ, ಕಾಗವಾಡ, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ. | ಡಿಎ (ಅರವಳಿಕೆ) | ಎಂಎಂಸಿ, ಮೈಸೂರು. | ಎಸ್‌ಟಿ |
| 67. | 96 | ಡಾ: ವಿನುತಾ ಕೆ., ಬೆಂಗಳೂರು ನಗರ ಜಿಲ್ಲೆ. | ಡಿ (ಬ್ಯಾಕ್ಟರಿ ಯಾಲಜಿ) | ಬಿಎಂಸಿ, ಬೆಂಗಳೂರು. | ಜಿಎಂ |
| 68. | 14 | ಡಾ: ಆನಂದ್ ಜಿ., ಪ್ರಾ.ಆ.ಕೇಂದ್ರ, ಹಿರೇಗುತ್ತಿ, ಕುಮಟಾ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. | ಡಿಸಿಹೆಚ್ | ಎಂಎಂಸಿ, ಮೈಸೂರು | ಜಿಎಂ |
| 69. | 34 | ಡಾ: ತಿಪ್ಪೇಸ್ವಾಮಿ ಎ., ಜಿಎಡಿ, ಬಂಡಟ್ಟಿ, ಬಳ್ಳಾರಿ ಜಿಲ್ಲೆ. | ಡಿಸಿಹೆಚ್ | ಜೆಎಸ್‌ಎಸ್, ಮೈಸೂರು. | ಜಿಎಂ |
| 70. | 68 | ಡಾ: ವಾಗೀಶ್ ಎಸ್., ಪ್ರಾ.ಆ. ಕೇಂದ್ರ, ಹೆಸರಘಟ್ಟ, ಬೆಂಗಳೂರು ನಗರ ಜಿಲ್ಲೆ. | ಡಿಸಿಹೆಚ್ | ಜೆಜೆಎಂಎಂಸಿ, ದಾವಣಗೆರೆ | ಜಿಎಂ |
| 71. | 73 | ಡಾ: ಪ್ರಕಾಶ್ ಜೈನ್ ಆರ್.ಬಿ., ಪ್ರಾ.ಆ. ಘಟಕ, ಯಲಂಬಲ್ಸೆ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. | ಡಿಸಿಹೆಚ್ | ಜೆಎನ್‌ಎಂಸಿ, ಬೆಳಗಾಂ. | ಜಿಎಂ |
| 72. | 85 | ಡಾ: ರಮೇಶ್ ಬಾಬು, ಕಾರಾಗೃಹ ಆಸ್ಪತ್ರೆ, ರಾಯಚೂರು. | ಡಿಸಿಹೆಚ್ | ಬಿಎಂಸಿ, ಬೆಂಗಳೂರು. | ಎಸ್‌ಸಿ |
| 73. | 90 | ಡಾ: ಸುಮ ಬಿ.ಎಸ್., ಬೆಂ.ಮ. ಪಾಲಿಕೆ, ಬೆಂಗಳೂರು. (ನಿಯೋಜನೆಯಲ್ಲಿರುವ) | ಡಿಸಿಹೆಚ್ | ಸಿದ್ದಾರ್ಥ ವೈದ್ಯಕೀಯ ಮಹಾ ವಿದ್ಯಾಲಯ, ತುಮಕೂರು. | ಜಿಎಂ |
| 74. | 28 | ಡಾ: ಆಶಾ ಭಟ್ ಕೆ.ಐ., ಜಿಲ್ಲಾ ಆಸ್ಪತ್ರೆ, ಕಾರವಾರ. | ಡಿಜಿಓ | ಬಿಎಂಸಿ, ಬೆಂಗಳೂರು | ಜಿಎಂ |
| 75. | 45 | ಡಾ: ಕೃಷ್ಣ ಜಿ., ಪ್ರಾ.ಆ.ಘಟಕ, ಹೊಸದ್, ಹೊನ್ನಾವಾರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. | ಡಿಜಿಓ | ಕಿಮ್ಸ್, ಹುಬ್ಬಳ್ಳಿ | ಜಿಎಂ |
| 76. | 48 | ಡಾ: ಚಂದ್ರ ಮರಕಳ, ಪ್ರಾ.ಆ. ಕೇಂದ್ರ, ನಡ, ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ. | ಡಿಜಿಓ | ಎಂಎಂಸಿ, ಮೈಸೂರು. | ಜಿಎಂ |
| 77. | 54 | ಡಾ: ರಾಧಾ ದೇವಿ ಕೆ., ಪ್ರಾ.ಆ. ಕೇಂದ್ರ, ಬಿಳಿಗೆರೆ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ. | ಡಿಜಿಓ | ಡಿಯುಎಂಸಿ, ಕೋಲಾರ | ಜಿಎಂ |
| 78. | 63 | ಡಾ: ಕಬಾಡೆ ಇಂದಿರಾ, ಪ್ರಾ.ಆ. ಘಟಕ, ವಡಗಾಂವ್, ಬೆಳಗಾಂ ಜಿಲ್ಲೆ. | ಡಿಜಿಓ | ಜೆಎನ್‌ಎಂಸಿ, ಬೆಳಗಾಂ. | ಜಿಎಂ |
| 79. | 105 | ಡಾ: ರಜನಿ ಜಿ.ಎಂ., ಸ.ಆ. ಕೇಂದ್ರ, ಚಿಟಗುಪ್ಪ, ಬೀದರ್ ಜಿಲ್ಲೆ. | ಡಿಜಿಓ | ಬಿಎಲ್‌ಡಿಇಎ, ಬಿಜಾಪುರ. | ಜಿಎಂ |
| 80. | 116 | ಡಾ: ಗಾಯಿತ್ರಿ ದೇವಿ ಆರ್., ಪ್ರಾ.ಆ.ಕೇಂದ್ರ, ನ್ಯಾಮತಿ, ದಾವಣಗೆರೆ ಜಿಲ್ಲೆ. | ಡಿಜಿಓ | ಕೆಎಂಸಿ, ಮಂಗಳೂರು. | ಜಿಎಂ |
| 81. | 50 | ಡಾ: ಮಂಜುಳಾ ಕೆ.ಎಲ್., ಪ್ರಾ.ಆ.ಘಟಕ, ಗೌಡಗೆರೆ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ. | ಡಿಎಂ ಆರ್‌ಡಿ | ಬಿಎಂಸಿ, ಬೆಂಗಳೂರು. | ಜಿಎಂ |

| 1 | 2 | 3 | 4 | 5 | 6 |
|---|---|---|---|---|---|
| 82. | 64 | ಡಾ: ಪುಷ್ಪಲತಾ ಕೆ.ಎನ್., ಪ್ರಾ.ಆ.ಘಟಕ, ಸದಹಳ್ಳಿ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು (ಗ್ರಾ) ಜಿಲ್ಲೆ. | ಡಿಎಂ ಆರ್‌ಡಿ | ಡಿಯುಎಂಸಿ, ಕೋಲಾರ. | ಎಸ್‌ಸಿ |
| 83. | 84 | ಡಾ: ಕುಮಾರ್ ಆರ್., ಪ್ರಾ.ಆ.ಘಟಕ, ಹರಿಶಿ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಡಿಎಂ ಆರ್‌ಡಿ | ಜೆಜೆಎಂಸಿ, ದಾವಣಗೆರೆ. | ಜಿಎಂ |
| 84. | 87 | ಡಾ: ಅರುಣಾ ಹೆಚ್.ಎನ್., ಪ್ರಾ.ಆ.ಘಟಕ, ಹೇತಗೌಡನಹಳ್ಳಿ, ಹಾಸನ ಜಿಲ್ಲೆ. | ಡಿಎಂ ಆರ್‌ಡಿ | ಜೆಎನ್‌ಎಂಸಿ, ಬೆಳಗಾಂ. | ಜಿಎಂ |
| 85. | 66 | ಡಾ: ಉಮಾಶಂಕರಿ ಎ., ಪ್ರಾ.ಆ.ಕೇಂದ್ರ, ಕ್ಯಾಸಂಬರಹಳ್ಳಿ, ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ. | ಡಿಓ ಎಂಎಸ್ | ಬಿಎಂಸಿ, ಬೆಂಗಳೂರು. | ಜಿಎಂ |
| 86. | 104 | ಡಾ: ಜ್ಯೋತಿವೆಂಕಣ್ಣ ಬೇವಿನಮರದ್, ಪ್ರಾ.ಆ.ಕೇಂದ್ರ, ಶಿರಗುಪ್ಪಿ, ಧಾರವಾಡ ಜಿಲ್ಲೆ. | ಡಿಓ ಎಂಎಸ್ | ಕಿಮ್ಸ್, ಹುಬ್ಬಳ್ಳಿ. | ಎಸ್‌ಸಿ |
| 87. | 94 | ಡಾ: ನರೇಂದ್ರ ಕುಮಾರ್ ಹೆಚ್.ಎಸ್., ಪ್ರಾ.ಆ.ಕೇಂದ್ರ, ಹಿರಿಅಡಕ, ಉಡುಪಿ ಜಿಲ್ಲೆ. | ಡಿ (ಆರ್ಥೋ) | ಕಿಮ್ಸ್, ಹುಬ್ಬಳ್ಳಿ | ಜಿಎಂ |
| 88. | 51 | ಡಾ: ಗಿರಿಜಾಂಬ ಡಿ., ಪ್ರಾ.ಆ.ಕೇಂದ್ರ, ಪಾಂಯದಹುಂಡಿ, ಚಾಮರಾಜನಗರ ಜಿಲ್ಲೆ. | ಡಿಟಿಸಿಡಿ | ಎಂಎಂಸಿ, ಮೈಸೂರು. | ಜಿಎಂ |

ಎಸ್.ಆರ್. ಶಂಕರ್

ಪಿ.ಆರ್. 668 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## COMMERCE & INDUSTRIES SECRETARIAT

**Subject:** Entrustment of Audit of Accounts of KIADB for the years 2004-05 to 2008-09 to the Controller and Auditor General of India-Regarding.

**Read:** Letter No. IADB/AS(Audit)/13466/04-05, dated: 24.01.2005 of the CEO & EM, KIADB, Bangalore-1.

**PREAMBLE:**

The Chief Executive Officer and Executive Member, KIADB in his letter dated: 24.01.2005 read at (1) above has requested the Government to entrustment of statutory Audit of the Accounts of KIADB for the Financial year 2004-05 to 2008-09 and to accept the stand and terms and conditions prescribed by the C & A.C.

Hence, the following orders:-

**GOVERNMENT ORDER No. CI 61 SPQ 2005, Bangalore, Dated: 21st April 2005**

Government is pleased to appoint the Accountant General, Bangalore, as Statutory Auditors for conducting Audit of Accounts of KIADB for the Financial year 2004-05 to 2008-09.

This order issued with the concurrence of FD Vide U.O.Note No. FD 708 EXP-1/05, dated: 12.04.2005.

By Order and in the Name of the Governor of Karnataka,

**M. SHIVALINGASWAMY**

P.R. 673 Under Secretary to Government (ID),
Commerce & Industries Department.

## REVENUE SECRETARIAT

**CORRIGENDUM No. RD 29 LGU 2002, Bangalore, Dated: 9th May 2005**

The following sub para be substituted and read as follows in place of sub para (3) of Government Order No. RD 29 LGU 2002, dated: 14.03.2005.

"(3) Forest Department is directed to examine rehabilitation of people or a small number of encroachers evicted from the forests such as Sargod, Maskalli in the area of 10,000 Hectares remaining saved after accommodating categories of encroachers named above.

and

In place of words "Reserved Forest" appearing in the third and eighth line of sub-para (1) of para 1 in the order portion "Forest Reserve" be substituted.

By Order and in the Name of the Governor of Karnataka,

**N.A. MARGARET**

P.R. 674 Under Secretary to Government, Revenue Department (Land Grants)

## ಕಾನೂನು ಸಚಿವಾಲಯ

**ವಿಷಯ:** ಬಾಗಲಕೋಟೆ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಲಾ 21 ಎಲ್‌ಎಸಿ 2004, ದಿನಾಂಕ: 7.8.2004.

2) ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜಿಓಬಿ-2-408(23)2004, ದಿನಾಂಕ: 5.1.2005.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1) 1ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಬಾಗಲಕೋಟೆ.

2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ), ಜಮಖಂಡಿ.

3) 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ), ಬಾಗಲಕೋಟೆ.

4) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಬೀಳಗಿ.

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2) ಪತ್ರದಲ್ಲಿ ಕೋರಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಲಾ 102 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2005

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿರುವ ನಾಲ್ಕು ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 671 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಹೆಚ್.ವಿ. ನಂಜೇಶಯ್ಯ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ವೈ.ಎಲ್. ಹರೀಶ್, ಅಂದಿನ ಸಹಾಯಕ ಇಂಜಿನಿಯರ್, ಜಿ.ಪಂ.ಇಂ. ಉಪ ವಿಭಾಗ, ಹಾಸನ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ-ಆದೇಶ.

**ಓದಲಾಗಿದೆ:** 1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾಸನ ಇವರ ಪತ್ರದ ಸಂಖ್ಯೆ: ಜಿಪಂಹಾ/ಆ(2)/ಸಿಸಿಎ-2/04-05, ದಿನಾಂಕ: 5.7.2004.

2. ಆಪಾದಿತರುಗಳಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿದ ದಿನಾಂಕ: 3.2.2005.

3. ಆಪಾದಿತರುಗಳ ಲಿಖಿತ ಹೇಳಿಕೆ ದಿನಾಂಕ: 4.3.2005 ಮತ್ತು 5.4.2005.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಹಾಸನ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪ್ರಕಾರ ಸರ್ಕಾರಕ್ಕೆ ಪತ್ರ ಬರೆದು ಹಾಸನ ತಾಲ್ಲೂಕು, ಶಂಖದ ಹೊಸಹಳ್ಳಿ ಗ್ರಾಮದಲ್ಲಿ 2002-03ನೇ ಸಾಲಿನಲ್ಲಿ ಸುಮಾರು ರೂ.3.00 ಲಕ್ಷ ಅಂದಾಜಿನ ಬಸವೇಶ್ವರ ಸಮುದಾಯ ಭವನದ ಕಾಮಗಾರಿಯಲ್ಲಿ ಕೆಲವು ಭಾಗಗಳು ಅಂದರೆ, ಕಟ್ಟಡದ ಬಾಗಿಲು ಮತ್ತು ಕಿಟಕಿಗಳಿಗೆ ಷಟರ್ಸ್ ಹಾಕದೇ ಇರುವುದು, ನೆಲಹಾಸು ಮಾಡದೇ ಇರುವುದು, ಗೋಡೆ ಮತ್ತು ಬಾಗಿಲು ಕಿಟಕಿಗಳಿಗೆ ಬಣ್ಣ ಹಾಕದೇ ಇರುವುದು ಸಂಪೂರ್ಣವಾಗಿ ಕಾಮಗಾರಿ ಮುಗಿಯದಿದ್ದರೂ, ಕಾಮಗಾರಿ ಮುಗಿದಿದೆ ಎಂದು ಸುಳ್ಳು ದಾಖಲಿಸಿ ರೂ.63,715-63 ಗಳನ್ನು ಶ್ರೀ ಹೆಚ್.ವಿ. ನಂಜೇಶಯ್ಯ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ವೈ.ಎಲ್. ಹರೀಶ್, ಅಂದಿನ ಸಹಾಯಕ ಇಂಜಿನಿಯರ್, ಜಿಪಂಇಂ ಉಪ ವಿಭಾಗ, ಹಾಸನ ಇವರುಗಳು ಅಧಿಕಾರ ದುರುಪಯೋಗಪಡಿಸಿ ಕೊಂಡಿರುವುದರಿಂದ ಇವರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ದೋಷಾರೋಪಣಾ ಪಟ್ಟಿಯನ್ನು ಅನುಬಂಧ-1 ರಿಂದ 4 ರಲ್ಲಿ ಸರ್ಕಾರಕ್ಕೆ ಸಲ್ಲಿಸಿದ್ದರು.

ಸರ್ಕಾರವು ಪರಿಶೀಲಿಸಿ, ಅವರುಗಳ ಮೇಲಿನ ಆರೋಪಗಳನ್ನು ಅನುಬಂಧ-1 ರಿಂದ 4 ರಲ್ಲಿ ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪಿತರುಗಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 3.2.2005 ರಂದು ಜಾರಿ ಮಾಡಲಾಗಿತ್ತು.

ಈ ಪ್ರಕರಣದಲ್ಲಿ ಆರೋಪಿತರುಗಳಾದ ಶ್ರೀ ಹೆಚ್.ವಿ. ನಂಜೇಶಯ್ಯ, ಅಂದಿನ ಸಕಾಇಂ, ಮತ್ತು ಶ್ರೀ ವೈ.ಎಲ್. ಹರೀಶ್, ಅಂದಿನ ಸಹಾಯಕ ಇಂಜಿನಿಯರ್, ಜಿಪಂಇಂ ಉಪ ವಿಭಾಗ, ಹಾಸನ ಇವರುಗಳು ಲಿಖಿತ ಹೇಳಿಕೆ ಸಲ್ಲಿಸಿ, ಈ ಪ್ರಕರಣದಲ್ಲಿ ತಮ್ಮಗಳ ಮೇಲೆ ಹಾಸನ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ದಾಖಲಾಗಿದ್ದು, ನಿರೀಕ್ಷಣಾ ಜಾಮೀನನ್ನು ಪಡೆದಿರುವುದಾಗಿ ತಿಳಿಸುತ್ತಾ ಹಾಗೂ ಸದರಿ ಕಾಮಗಾರಿಯು ಪೂರ್ಣವಾಗಿದ್ದು ಸರ್ಕಾರಕ್ಕೆ ಯಾವುದೇ ನಷ್ಟವಾಗಿರುವುದಿಲ್ಲವಾದ ಕಾರಣ ತಮ್ಮಗಳ ಮೇಲಿನ ಆರೋಪಗಳನ್ನು ಕೈ ಬಿಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪ್ರಕಾರ ಕೋರಿರುತ್ತಾರೆ.

ಆದ್ದರಿಂದ, ಸರ್ಕಾರವು ಪರಿಶೀಲಿಸಿ ಈ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 31 ಇಎನ್‌ಕ್ಯೂ 2004, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಸನ ತಾಲ್ಲೂಕು ಶಂಖದ ಹೊಸಹಳ್ಳಿ ಗ್ರಾಮದ ಬಸವೇಶ್ವರ ಸಮುದಾಯದ ಕಾಮಗಾರಿಗಳ ಅವ್ಯವಹಾರದಲ್ಲಿ ಒಳಗೊಂಡಿದ್ದಾರೆನ್ನಲಾಗಿರುವ ಶ್ರೀ ಹೆಚ್.ವಿ. ನಂಜೇಶಯ್ಯ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ವೈ.ಎಲ್. ಹರೀಶ್, ಅಂದಿನ ಸಹಾಯಕ ಇಂಜಿನಿಯರ್, ಜಿ.ಪಂ.ಇಂ. ಉಪ ವಿಭಾಗ, ಹಾಸನ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11ರ ವಿಧಿ ವಿಧಾನಗಳನ್ನನುಸರಿಸಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಮಗಳ ನಿಯಮ 11(2)ರ ರೀತ್ಯ ಶ್ರೀ ಎಸ್. ಇಂದೂಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್, ಹಾಸನ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಯವರು ಪ್ರಕರಣದ ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸತಕ್ಕದ್ದು. ವರದಿ ಸಲ್ಲಿಸಿದ ನಂತರ ನಿಯಮಾನುಸಾರ ವಿಚಾರಣಾಧಿಕಾರಿಯವರಿಗೆ ಸಂಭಾವನೆಯನ್ನು ಮಂಜೂರು ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 675

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ರಾಜ್ಯದಲ್ಲಿರುವ ಜಿಲ್ಲಾ ನಗರ ಯೋಜನಾ ಕೋಶದ ಸಿಬ್ಬಂದಿಗಳ ರಹಸ್ಯ ವರದಿಗಳನ್ನು ಬರೆಯುವ ಪ್ರಾಧಿಕಾರಗಳನ್ನು ಗೊತ್ತುಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ನಅಇ 34 ಇಎಂಸಿ 03, ದಿನಾಂಕ: 15.12.2003.

2) ಪೌರಾಡಳಿತ ನಿರ್ದೇಶಕರ ಕಡತ ಸಂಖ್ಯೆ: ಪೌನಿ:ಸಿಬ್ಬಂದಿ:ಕೇಜಿ:ಸಿಆರ್:35:2004-05.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 15.12.2003ರ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿರುವ ನಗರ ಸಭೆಗಳು ಮತ್ತು ಪುರಸಭೆಗಳಲ್ಲಿ ಕರ್ತವ್ಯ ನಿರ್ವಹಿಸುವ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳು ಮತ್ತು ನೌಕರರು ಹಾಗೂ ಪೌರಸೇವಾ ನೌಕರರುಗಳ ರಹಸ್ಯ ವರದಿಗಳನ್ನು ಬರೆಯುವ ಸಂಬಂಧ ವರದಿ ಮಾಡುವ ಪ್ರಾಧಿಕಾರ : ಪರಿಶೀಲನಾ ಪ್ರಾಧಿಕಾರ ಹಾಗೂ ಅಂಗೀಕರಿಸುವ ಪ್ರಾಧಿಕಾರಗಳನ್ನು ಗೊತ್ತುಪಡಿಸಿ ಆದೇಶಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಕಡತದಲ್ಲಿ ಪೌರಾಡಳಿತ ನಿರ್ದೇಶಕರು ರಾಜ್ಯದಲ್ಲಿರುವ ಜಿಲ್ಲಾ ನಗರ ಯೋಜನಾ ಕೋಶದ ಸಿಬ್ಬಂದಿಗಳ ರಹಸ್ಯ ವರದಿಗಳನ್ನು ಬರೆಯುವ ಸಂಬಂಧ ವರದಿ ಮಾಡುವ ಪ್ರಾಧಿಕಾರ : ಪರಿಶೀಲನಾ ಪ್ರಾಧಿಕಾರ ಮತ್ತು ಅಂಗೀಕರಿಸುವ ಪ್ರಾಧಿಕಾರಗಳನ್ನು ಗುರುತಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರವು ಪೌರಾಡಳಿತ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 34 ಇಎಂಸಿ 2003(ಭಾ), ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಸರ್ಕಾರದ ಆದೇಶ ಸಂಖ್ಯೆ: ನಅಇ 34 ಇಎಂಸಿ 2003, ದಿನಾಂಕ: 15.12.2003 ಅನ್ನು ಮುಂದುವರೆಸುತ್ತಾ, ರಾಜ್ಯದಲ್ಲಿರುವ ಜಿಲ್ಲಾ ನಗರ ಯೋಜನಾ ಕೋಶಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಧಿಕಾರಿಗಳ ಮತ್ತು ನೌಕರರ ರಹಸ್ಯ ವರದಿಗಳನ್ನು ಬರೆಯುವ ಸಂಬಂಧ ವರದಿ ಮಾಡುವ ಪ್ರಾಧಿಕಾರ, ಪರಿಶೀಲನಾ ಪ್ರಾಧಿಕಾರ ಹಾಗೂ ಅಂಗೀಕರಿಸುವ ಪ್ರಾಧಿಕಾರಗಳನ್ನು ಈ ಕೆಳಕಂಡಂತೆ ಗೊತ್ತುಪಡಿಸಿ ಆದೇಶಿಸಿದೆ:-

| ಕ್ರ.ಸಂ. | ಅಧಿಕಾರಿ:ನೌಕರರ ವರ್ಗ | ವರದಿ ಮಾಡುವ ಪ್ರಾಧಿಕಾರ | ಪರಿಶೀಲಿಸುವ ಪ್ರಾಧಿಕಾರ | ಅಂಗೀಕರಿಸುವ ಪ್ರಾಧಿಕಾರ |
|---|---|---|---|---|
| 1 | ಗ್ರೂಪ್-ಎ ಮತ್ತು ಬಿ ವರ್ಗದ ಅಧಿಕಾರಿಗಳು | ಜಿಲ್ಲಾಧಿಕಾರಿಗಳು | ಪೌರಾಡಳಿತ ನಿರ್ದೇಶಕರು | ಸರ್ಕಾರ |
| 2 | ಗ್ರೂಪ್-ಸಿ ವರ್ಗದ ನೌಕರರು | ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಬಿವೃದ್ಧಿ ಕೋಶ | ಜಿಲ್ಲಾಧಿಕಾರಿಗಳು | ಪೌರಾಡಳಿತ ನಿರ್ದೇಶಕರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ. ರಾಘವೇಂದ್ರಾಚಾರ್**

ಪಿ.ಆರ್. 678

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಮರಿಯಪ್ಪ ಮೂಲಿಮನಿ, ವೈದ್ಯಾಧಿಕಾರಿ, ಜಿಲ್ಲಾ ಆಸ್ಪತ್ರೆ, ಬಾಗಲಕೋಟೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003, ದಿನಾಂಕ: 05.8.2004.

2) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಜಿ (2) 24: 2004-05, ದಿನಾಂಕ: 8.1.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಡಾ: ಮರಿಯಪ್ಪ, ಮೂಲಿಮನಿ, ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೇಮಕಾತಿ ಹೊಂದಿರುತ್ತಾರೆ. ಸದರಿ ಅಧಿಸೂಚನೆಯನ್ವಯ ದಿನಾಂಕ: 20.8.2004 ರಂದು ಜಿಲ್ಲಾ ಆಸ್ಪತ್ರೆ, ಬಾಗಲಕೋಟೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿ ನಂತರ ದಿನಾಂಕ: 24.8.2004 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಮೇಲೆ ಕ್ರಮಾಂಕ (2) ರಲ್ಲಿನ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಇರುವಾಗಲೇ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಖಾಯಂಪೂರ್ವ ಸೇವಾ ನಿಯಮಗಳಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಆಯುಕ್ತರು, ಆಕುಕ ಸೇವೆಗಳು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 209 ಹೆಚ್ಎಸ್ಹೆಚ್ 2005, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಮರಿಯಪ್ಪ ಮೂಲಿಮನಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಜಿಲ್ಲಾ ಆಸ್ಪತ್ರೆ, ಬಾಗಲಕೋಟೆ ಇವರು ದಿನಾಂಕ: 24.08.2004 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 24.08.2004 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ - ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಜಗದೀಶಯ್ಯ**

ಪಿ.ಆರ್. 680 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಡಾ: ಆನಂದಕುಮಾರ್ ಡಿ. ಗಂಗಜಿ, ವೈದ್ಯಾಧಿಕಾರಿ, ಎಲ್‌ಸಿಡಿಆರ್, ಗುಲ್ಬರ್ಗ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 648 ಹೆಚ್ಎಸ್ಹೆಚ್ 2002, ದಿನಾಂಕ: 24.8.2002.

2) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಡಿಪಿಜಿ (2) 33: 2002-03, ದಿನಾಂಕ: 8.10.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಡಾ: ಆನಂದಕುಮಾರ್ ಡಿ. ಗಂಗಜಿ, ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೇಮಕಾತಿ ಹೊಂದಿರುತ್ತಾರೆ. ಸದರಿ ಅಧಿಸೂಚನೆಯನ್ವಯ ದಿನಾಂಕ: 13.9.2002 ರಂದು ಎಲ್‌ಸಿಡಿಆರ್, ಜಿಲ್ಲಾ ಆಕುಕ ಅಧಿಕಾರಿಗಳ ಕಛೇರಿ, ಗುಲ್ಬರ್ಗ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿ, ತದನಂತರ ದಿನಾಂಕ: 1.1.2003 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತಾರೆ. ಮೇಲೆ ಕ್ರಮಾಂಕ (2) ರಲ್ಲಿನ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಇರುವಾಗಲೇ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಖಾಯಂಪೂರ್ವ ಸೇವಾ ನಿಯಮಗಳಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಆಯುಕ್ತರು, ಆಕುಕ ಸೇವೆಗಳು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 196 ಹೆಚ್ಎಸ್ಹೆಚ್ 2005, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಆನಂದಕುಮಾರ್ ಡಿ. ಗಂಗಜಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಎಲ್‌ಸಿಡಿಆರ್, ಜಿಲ್ಲಾ ಆಕುಕ ಅಧಿಕಾರಿಗಳ ಕಛೇರಿ, ಗುಲ್ಬರ್ಗ ಇವರು ದಿನಾಂಕ: 1.1.2003 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 1.1.2003 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎಸ್. ಜಗದೀಶಯ್ಯ**

ಪಿ.ಆರ್. 681 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಸಿಆಸುಇ 46 ಇಆಸು 2004, ಬೆಂಗಳೂರು, ದಿನಾಂಕ: 6ನೇ ಮೇ 2005**

**ವಿಷಯ:** ಅತ್ಯುತ್ತಮ ಪ್ರಗತಿ ಸಾಧಿಸಿದ ನಾಗರೀಕ ಸೇವಾ ಸಿಬ್ಬಂದಿಗೆ ರಾಜ್ಯ ಪ್ರಶಸ್ತಿ ನೀಡುವ ಬಗ್ಗೆ ವಿಶೇಷ ಯೋಜನೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 46 ಇಆಸು 2004, ದಿನಾಂಕ: 26.02.2005.

ಉಲ್ಲೇಖಿತ ಆದೇಶದಲ್ಲಿ ತಿಳಿಸಲಾದ ಲೆಕ್ಕಶೀರ್ಷಿಕೆ 2052-00-090-0-51 ಯೋಜನೇತರ ಎಂಬುದರ ಬದಲಿಗೆ ಈ ಸಂಬಂಧವಾದ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2052-00-090-0-18-015 ಪೂರಕ ವೆಚ್ಚಗಳು ಎಂದು ಓದುವುದು.

ಈ ತಿದ್ದುಪಡಿಯನ್ನು ಆರ್ಥಿಕ ಇಲಾಖೆ ದಿನಾಂಕ: 25.4.2004 ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 746/ವೆಚ್ಚ-5/2004 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಅನಸೂಯ**

ಪಿ.ಆರ್. 682 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ).

**ತಿದ್ದುಪಡಿ ಸಂಖ್ಯೆ: ಸಿಆಸುಇ 2 ಇಆಸು 2005, ಬೆಂಗಳೂರು, ದಿನಾಂಕ: 6ನೇ ಮೇ 2005**

**ವಿಷಯ:** ಅತ್ಯುತ್ತಮ ಪ್ರಗತಿ ಸಾಧಿಸಿದ ನಾಗರೀಕ ಸೇವಾ ಸಿಬ್ಬಂದಿಗೆ ರಾಜ್ಯ ಪ್ರಶಸ್ತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಇಆಸು 2002, ದಿನಾಂಕ: 13.08.2003.

2. ತಿದ್ದುಪಡಿ ಆದೇಶ ಸಂಖ್ಯೆ: ಸಿಆಸುಇ 193 ಇಆತ 2003, ದಿನಾಂಕ: 25.10.2004

3. ತಿದ್ದುಪಡಿ ಆದೇಶ ಸಂಖ್ಯೆ: ಸಿಆಸುಇ 2 ಇಆಸು 2005, ದಿನಾಂಕ: 19.3.2003

ಅತ್ಯುತ್ತಮ ಪ್ರಗತಿ ಸಾಧಿಸಿದ ನಾಗರೀಕ ಸೇವಾ ಸಿಬ್ಬಂದಿಗೆ ರಾಜ್ಯ ಪ್ರಶಸ್ತಿ ನೀಡುವ ಬಗ್ಗೆ ಮಾರ್ಗಸೂಚಿಗಳನ್ನು ಮೇಲಿನ ಆದೇಶಗಳಲ್ಲಿ ಹೊರಡಿಸಲಾಗಿದ್ದು, ಈ ಸಂಬಂಧವಾಗಿ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ '2052-00-090-0-18-015-ಪೂರಕ ವೆಚ್ಚಗಳು' ಇದರಡಿಯಲ್ಲಿ ಭರಿಸತಕ್ಕದ್ದು ಎಂದು ಆದೇಶಿಸಿದೆ.

ಈ ತಿದ್ದುಪಡಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/746/ವೆಚ್ಚ-5/2004 ದಿನಾಂಕ: 25.4.2005ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಅನಸೂಯ**

ಪಿ.ಆರ್. 683 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ತರಬೇತಿ).

**ವಿಷಯ:** ವಿಕಾಸಸೌಧ ಕಟ್ಟಡದಲ್ಲಿ ಸಚಿವಾಲಯದ ಇಲಾಖೆಗಳು ಮತ್ತು ಸಚಿವರುಗಳಿಗೆ ಸ್ಥಳಾವಕಾಶ ಒದಗಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 94 ಡಿಬಿಎಂ 2003, ದಿನಾಂಕ: 4.4.2003.

2) ಆದೇಶ ಸಂಖ್ಯೆ: ಸಿಆಸುಇ 94 ಡಿಬಿಎಂ 2003, ದಿನಾಂಕ: 26.7.2003.

3) ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಸಮಿಇಯ ದಿನಾಂಕ: 4.5.2004ರ ನಡವಳಿ.

4) ಆದೇಶ ಸಂಖ್ಯೆ: ಸಿಆಸುಇ 120 ಡಿಬಿಎಂ 2004, ದಿನಾಂಕ: 12.7.2004.

5) ಆದೇಶ ಸಂಖ್ಯೆ: ಸಿಆಸುಇ 286 ಡಿಬಿಎಂ 2003, ದಿನಾಂಕ: 7.12.2004.

**ಪ್ರಸ್ತಾವನೆ:**

ಹೊಸದಾಗಿ ನಿರ್ಮಾಣಗೊಳ್ಳುತ್ತಿರುವ ವಿಕಾಸಸೌಧ ಕಟ್ಟಡದಲ್ಲಿ ಸಚಿವರುಗಳು ಮತ್ತು ಸಚಿವಾಲಯದ ಕಛೇರಿಗಳಿಗೆ ಸ್ಥಳಾವಕಾಶ ಒದಗಿಸುವ ಬಗ್ಗೆ ಶಿಫಾರಸ್ಸು ಮಾಡುವ ಸಂಬಂಧ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಒಂದು ಸಮಿತಿಯನ್ನು ರಚಿಸಲಾಗಿತ್ತು. ಸಮಿತಿಯ ಶಿಫಾರಸ್ಸಿನಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಆದೇಶದಲ್ಲಿ ಹೊಸ ವಿಕಾಸಸೌಧ ಕಟ್ಟಡದಲ್ಲಿ 15 ಸಚಿವರುಗಳು ಮತ್ತು 15 ಸಚಿವಾಲಯದ ಇಲಾಖೆಗಳಿಗೆ ಸ್ಥಳಾವಕಾಶ ಒದಗಿಸಲಾಗಿತ್ತು. ತದನಂತರ ವೈದ್ಯಕೀಯ ಶಿಕ್ಷಣ ಸಚಿವರು ಮತ್ತು ವೈದ್ಯಕೀಯ ಶಿಕ್ಷಣ ಇಲಾಖೆಗೆ ಒದಗಿಸಲಾಗಿದ್ದ ಸ್ಥಳಾವಕಾಶದಲ್ಲಿ ಮುಖ್ಯ ಮಂತ್ರಿಯವರಿಗೆ ಮತ್ತು ಅವರ ಕೆಲವು ಅಧಿಕಾರಿಗಳಿಗೆ ಸ್ಥಳಾವಕಾಶ ಒದಗಿಸಲು ಮುಖ್ಯ ಮಂತ್ರಿಗಳ ಆದೇಶದಂತೆ ಲೋಕೋಪಯೋಗಿ ಇಲಾಖೆಯು ಕ್ರಮ ತೆಗೆದುಕೊಂಡಿದ್ದು, ಸಮಿತಿಯು ಈ ಕ್ರಮವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ದೃಢೀಕರಿಸಿದ್ದು, ವೈದ್ಯಕೀಯ ಶಿಕ್ಷಣ ಇಲಾಖೆ, ಬಹುಮಹಡಿ ಕಟ್ಟಡದಲ್ಲಿ ಉಳಿಯುವುದೆಂದು ತೀರ್ಮಾನಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಕ್ರಮ ಸಂಖ್ಯೆ (1) ರಲ್ಲಿ ರಚಿಸಿರುವ ಸಮಿತಿಯನ್ನು ಪುನರ್ ರಚಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ಮುಖ್ಯ ಮಂತ್ರಿಗಳು, ಸಚಿವರು ಮತ್ತು ಹಿರಿಯ ಅಧಿಕಾರಿಗಳು ಆಗಾಗ ಕಾನೂನು ಇಲಾಖೆಯೊಂದಿಗೆ ಪ್ರಮುಖ ವಿಷಯಗಳ ಬಗ್ಗೆ ಸಮಾಲೋಚಿಸಬೇಕಾಗಿರುವುದರಿಂದ ಕಾನೂನು ಇಲಾಖೆಯನ್ನು ವಿಧಾನಸೌಧದಲ್ಲೇ ಉಳಿಸಿ ಅದರ ಬದಲು ಕೃಷಿ ಮತ್ತು ತೋಟಗಾರಿಕೆ ಇಲಾಖೆಯನ್ನು ಹೊಸ ವಿಕಾಸಸೌಧ ಕಟ್ಟಡಕ್ಕೆ ಸ್ಥಳಾಂತರಿಸಲು ತೀರ್ಮಾನಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವರು ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಒದಗಿಸಲಾಗಿದ್ದು, ಬಹುಮಹಡಿ ಕಟ್ಟಡದಲ್ಲಿಯೇ ಆ ಇಲಾಖೆಯನ್ನು ಉಳಿಸಬೇಕೆಂಬ ಕೋರಿಕೆ ಮೇರೆಗೆ ಆ ಸ್ಥಳಾವಕಾಶವನ್ನು ಪಶುಸಂಗೋಪನೆ ಮತ್ತು ವಕ್ಫ್ ಸಚಿವರು ಹಾಗೂ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ಹಂಚಿಕೆ ಮಾಡಲು ಸಮಿತಿಯು ಶಿಫಾರಸ್ಸು ಮಾಡಿದೆ. ಆದುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 57 ಡಿಬಿಎಂ 2005, ಬೆಂಗಳೂರು, ದಿನಾಂಕ: 4ನೇ ಮೇ 2005**

ಮೇಲೆ ನೀಡಿರುವ ವಿವರಗಳ ಹಿನ್ನೆಲೆಯಲ್ಲಿ ಹೊಸ ವಿಕಾಸಸೌಧ ಕಟ್ಟಡದಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವರು ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಹಂಚಿಕೆ ಮಾಡಿರುವ ಸ್ಥಳಾವಕಾಶವನ್ನು ಪಶುಸಂಗೋಪನೆ ಮತ್ತು ವಕ್ಫ್ ಸಚಿವರು ಹಾಗೂ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ಹಂಚಿಕೆ ಮಾಡಲು ಈ ಮೂಲಕ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ರವಿಮೂರ್ತಿ**

ಪಿ.ಆರ್. 684 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಕಾರ್ಯಕಾರಿ-1)

## ಶಿಕ್ಷಣ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಇಡಿ 123 ಯುಆರ್‌ಸಿ 2005, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2005**

ದಿನಾಂಕ: 17.03.2005 **ಸಂಖ್ಯೆ: ಇಡಿ 123 ಯುಆರ್‌ಸಿ 2005** ರ ಸರ್ಕಾರಿ ಆದೇಶದಲ್ಲಿ ಎಲ್ಲೆಲ್ಲಿ **2005-06ನೇ ಶೈಕ್ಷಣಿಕ ಸಾಲಿಗೆ** ಎಂದು ನಮೂದಿಸಲಾಗಿದೆಯೋ ಅದರ ಬದಲಾಗಿ **2004-05ನೇ ಶೈಕ್ಷಣಿಕ ಸಾಲಿಗೆ** ಎಂದು ತಿದ್ದಿಕೊಂಡು ಓದತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಪಿ.ಆರ್. 685 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

**ವಿಷಯ:** ಸಾರ್ವಜನಿಕ ಶಿಕ್ಷಣ ಇಲಾಖೆ, ಪದವಿ ಪೂರ್ವ ಶಿಕ್ಷಣ ಇಲಾಖೆ ಮತ್ತು ಗ್ರಂಥಾಲಯ ಇಲಾಖೆಗಳಿಗೆ ಸಂಬಂಧಿಸಿದಂತೆ ಶೇಕಡ 20 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸಭಾ ನಡವಳಿಗಳ ಸಂಖ್ಯೆ: ಸಿಆಸುಇ 17 ಈಸಪ 2005, ದಿನಾಂಕ: 12.04.2005.
2) ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಪತ್ರ ಸಂಖ್ಯೆ: ಸಿ5(1) ಹುದ್ದೆ ಕಡಿತ-75/ಭಾಗ-1/99-2000, ದಿನಾಂಕ: 21.04.2005.
3) ನಿರ್ದೇಶಕರು, ಪಪೂಶಿಇ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಪೂಶಿಇ/ಸಿಬ್ಬಂದಿ/ಸಿಆರ್-80%/2000 ದಿನಾಂಕ: 25.04.2005.
4) ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಇವರ ಪತ್ರ ಸಂಖ್ಯೆ: ಸಾಗ್ರಂಇ/ಸಿಬ್ಬಂದಿ/ಎ3/ಖಾಹುಭ/1536/2004-05, ದಿನಾಂಕ: 25.04.2005.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ದಿನಾಂಕ: 17.01.2005 ಹಾಗೂ 22.02.2005 ರಂದು ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುತ ಸಮಿತಿ ಸಭೆ ನಡವಳಿಗಳನ್ನು ಪ್ರಕಟಿಸಲಾಗಿದೆ. ಸದರಿ ನಡವಳಿಯಲ್ಲಿ ದಿನಾಂಕ: 01.04.2000 ದಂದು ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಇಲಾಖೆಗಳಲ್ಲಿನ ವಿವಿಧ ವೃಂದಗಳಲ್ಲಿ ಸತತವಾಗಿ 6 ವರ್ಷಗಳ ಕಾಲ ಖಾಲಿ ಇರುವ ಹುದ್ದೆಗಳಲ್ಲಿ ಒಟ್ಟು ಶೇಕಡ 20 ರಷ್ಟು ಹುದ್ದೆಗಳನ್ನು ಕಡಿತಗೊಳಿಸಲು ತೀರ್ಮಾನಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಇಲಾಖೆಯಲ್ಲಿ ದಿನಾಂಕ: 01.04.2000 ದಂದು 'ಡಿ' ವೃಂದದಲ್ಲಿ ಖಾಲಿ ಇದ್ದ 432 ಹುದ್ದೆಗಳ ಪೈಕಿ ಅಟೆಂಡರ್/ಡಿ ವರ್ಗದ 98 ಖಾಲಿ ಹುದ್ದೆಗಳನ್ನು ರದ್ದುಪಡಿಸಲು ಪ್ರಸ್ತಾವನೆ ಸಲ್ಲಿಸಿದ್ದು, ರದ್ದುಪಡಿಸಬಹುದಾದ ಹುದ್ದೆಗಳ ವಿವರಗಳನ್ನು ಅನುಬಂಧ-1 ರಲ್ಲಿ ನೀಡಿರುತ್ತಾರೆ.

ಮೇಲೆ ಓದಲಾದ (3)ರ ಪತ್ರದಲ್ಲಿ ನಿರ್ದೇಶಕರು ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಇಲಾಖೆಯಲ್ಲಿ ದಿನಾಂಕ: 01.04.2000 ದಂದು ವಿವಿಧ ವೃಂದಗಳಲ್ಲಿ ಸತತವಾಗಿ 6 ವರ್ಷಗಳ ಕಾಲ ಖಾಲಿ ಇರುವ 31 ಹುದ್ದೆಗಳನ್ನು ರದ್ದುಪಡಿಸಲು ಪ್ರಸ್ತಾವನೆ ಸಲ್ಲಿಸಿದ್ದು, ರದ್ದುಪಡಿಸಬಹುದಾದ ಹುದ್ದೆಗಳ ವಿವರಗಳು ಅನುಬಂಧ-2 ರಲ್ಲಿ ನೀಡಿರುತ್ತಾರೆ.

ಮೇಲೆ ಓದಲಾದ (4)ರ ಪತ್ರದಲ್ಲಿ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು, ಇವರು ಇಲಾಖೆಯಲ್ಲಿ ದಿನಾಂಕ: 01.04.2000 ದಂದು ವಿವಿಧ ವೃಂದಗಳಲ್ಲಿ ಸತತವಾಗಿ 6 ವರ್ಷಗಳ ಕಾಲ ಖಾಲಿ ಇದ್ದ ಈ ಕೆಳಕಂಡ 9 ಹುದ್ದೆಗಳನ್ನು ರದ್ದುಪಡಿಸಲು ಪ್ರಸ್ತಾಪಿಸಿದ್ದು, ವಿವರ ಕೆಳಗಿನಂತಿದೆ.

| | | | |
|---|---|---|---|
| 1. | ಶೀಘ್ರಲಿಪಿಗಾರರು | - | 1 |
| 2. | ಬೆರಳಚ್ಚುಗಾರರು | - | 5 |
| 3. | ಜವಾನರು | - | 3 |

ಮೇಲಿನ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಶೇಕಡ 20 ರಷ್ಟು ಹುದ್ದೆಗಳನ್ನು ರದ್ದುಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 341 ಡಿಪಿಐ 2004, ಬೆಂಗಳೂರು, ದಿನಾಂಕ: 3ನೇ ಮೇ 2005**

ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ (1) ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇಲ್ಲಿನ 98 ಗ್ರೂಪ್ 'ಡಿ' ಖಾಲಿ ಹುದ್ದೆಗಳನ್ನು ಅನುಬಂಧ-1 ರಲ್ಲಿರುವಂತೆ (ಸರ್ಕಾರದ ಆದೇಶ ಸಂಖ್ಯೆ: ಇಡಿ 146 ಡಿಪಿಐ 2005, ದಿನಾಂಕ: 21.02.2005 ರಲ್ಲಿ ರದ್ದುಪಡಿಸಿದ 19 'ಡಿ' ವರ್ಗದ ಹುದ್ದೆಗಳನ್ನು ಸೇರಿಸಿ ಒಟ್ಟು 98 ಹುದ್ದೆಗಳು) (2) ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಅನುಬಂಧ-2 ರಲ್ಲಿನ ಹುದ್ದೆಗಳನ್ನು ಮತ್ತು (3) ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡ ಖಾಲಿ ಹುದ್ದೆಗಳನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಪಡಿಸಿದೆ.

| | | | |
|---|---|---|---|
| 1. | ಶೀಘ್ರಲಿಪಿಗಾರರು | - | 1 |
| 2. | ಬೆರಳಚ್ಚುಗಾರರು | - | 5 |
| 3. | ಜವಾನರು | - | 3 |
| | **ಒಟ್ಟು** | **-** | **9** |

ಹುದ್ದೆಗಳನ್ನು ರದ್ದುಗೊಳಿಸಿದ ನಂತರ ಆಡಳಿತವನ್ನು ಸರಳ ಹಾಗೂ ಪರಿಣಾಮಕಾರಿಯಾಗಿ ನಡೆಸಲು (1) ಸಾರ್ವಜನಿಕ ಶಿಕ್ಷಣ ಇಲಾಖೆ, (2) ಪದವಿ ಪೂರ್ವ ಶಿಕ್ಷಣ ಇಲಾಖೆ ಮತ್ತು (3) ಸಾರ್ವಜನಿಕ ಗ್ರಂಥಾಲಯ ಇಲಾಖೆಗಳು, ಸಿಬ್ಬಂದಿ ಕರ್ತವ್ಯ ನಿರ್ವಹಣಾ ಪಟ್ಟಿಯನ್ನು (ಜಾಬ್ ಚಾರ್ಟ್) ಸೂಕ್ತವಾಗಿ ಪರಿಷ್ಕರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

**ಅನುಬಂಧ - 1**

**ಸಾರ್ವಜನಿಕ ಶಿಕ್ಷಣ ಇಲಾಖೆಯ ಶೇಕಡ 20 ರಷ್ಟು ಗ್ರೂಪ್-ಡಿ ಹುದ್ದೆಗಳ ರದ್ದತಿ:**

1) ಸರ್ಕಾರಿ ಪ್ರೌಢಶಾಲೆ ತಿಪ್ಪಗೊಂಡನಹಳ್ಳಿ, ಬೆಂಗಳೂರು ದಕ್ಷಿಣ ಜಿಲ್ಲೆ ವಲಯ-10, ಬೆಂಗಳೂರು ದಕ್ಷಿಣ
2) ಸರ್ಕಾರಿ ಪ್ರೌಢಶಾಲೆ ತಿಪ್ಪಗೊಂಡನಹಳ್ಳಿ, ಬೆಂಗಳೂರು ದಕ್ಷಿಣ ಜಿಲ್ಲೆ ವಲಯ-11, ಬೆಂಗಳೂರು ದಕ್ಷಿಣ
3) ಸರ್ಕಾರಿ ಪ್ರೌಢಶಾಲೆ ಮುದ್ದೋಳ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ
4) ಸರ್ಕಾರಿ ಪ್ರೌಢಶಾಲೆ, ಉಜಳಂಬ, ಬಸವಕಲ್ಯಾಣ, ಬೀದರ್ ಜಿಲ್ಲೆ

5) ಸರ್ಕಾರಿ ಪದವಿ ಪೂರ್ವ ಕಾಲೇಜು ಗುತ್ತಿಗಾರು, ಸುಳ್ಯ ತಾಲ್ಲೂಕು, ಮಂಗಳೂರು
6) ಸರ್ಕಾರಿ ಪದವಿ ಪೂರ್ವ ಕಾಲೇಜು ಬೆಳಮನೆ, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ
7) ಸರ್ಕಾರಿ ಪ್ರೌಢಶಾಲೆ, ರತ್ನಪುರಿ ಕಾವಲ್, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ
8) ಸರ್ಕಾರಿ ಪ್ರೌಢಶಾಲೆ, ರತ್ನಪುರಿ ಕಾವಲ್, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ
9) ಸರ್ಕಾರಿ ಪ್ರೌಢಶಾಲೆ, ತಿತಿಮತಿ, ಮಡಿಕೇರಿ ತಾಲ್ಲೂಕು, ಕೊಡಗು
10) ಸರ್ಕಾರಿ ಪ್ರೌಢಶಾಲೆ, ಕಟ್ಟೆಮಳಲವಾಡಿ, ಹುಣಸೂರು ತಾಲ್ಲೂಕು, ಮೈಸೂರು
11) ಸರ್ಕಾರಿ ಪ್ರೌಢಶಾಲೆ, ಕಗತ್ತೂರು, ದಾವಣಗೆರೆ ತಾಲ್ಲೂಕು, ದಾವಣಗೆರೆ
12) ಸರ್ಕಾರಿ ಪದವಿ ಪೂರ್ವ ಕಾಲೇಜು, ಬೈಲೂರು, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ
13) ಸರ್ಕಾರಿ ಪದವಿ ಪೂರ್ವ ಕಾಲೇಜು, ವಾಮಪದವು ಬಂಟ್ವಾಳ ತಾಲ್ಲೂಕು, ಮಂಗಳೂರು
14) ಸರ್ಕಾರಿ ಪ್ರೌಢಶಾಲೆ, ಹಿರೇಬೆಂಡಿಗೇರಿ, ಶಿಗ್ಗಾಂವ್ ತಾಲ್ಲೂಕು, ಹಾವೇರಿ ಜಿಲ್ಲೆ
15) ಸರ್ಕಾರಿ ಪ್ರೌಢಶಾಲೆ, (ಹೆಣ್ಣು ಮಕ್ಕಳು), ನರಗುಂದ ತಾಲ್ಲೂಕು, ಗದಗ್ ಜಿಲ್ಲೆ
16) ಸರ್ಕಾರಿ ಪದವಿ ಪೂರ್ವ ಕಾಲೇಜು, ಯರಮಲು, ಬಾಡ, ಉಡುಪಿ ತಾಲ್ಲೂಕು, ಉಡುಪಿ
17) ಸರ್ಕಾರಿ ಪದವಿ ಪೂರ್ವ ಕಾಲೇಜು, ಪಡುಬಿದ್ರೆ, ಉಡುಪಿ ತಾಲ್ಲೂಕು, ಉಡುಪಿ
18) ಸರ್ಕಾರಿ ಪದವಿ ಪೂರ್ವ ಕಾಲೇಜು, ನರಗುಂದ, ನರಗುಂದ ತಾಲ್ಲೂಕು, ಗದಗ್
19) ಸರ್ಕಾರಿ ಪ್ರೌಢಶಾಲೆ, ಹವಸೋಗೆ, ಕೆ.ಆರ್. ನಗರ ತಾಲ್ಲೂಕು, ಮೈಸೂರು
20) ಸರ್ಕಾರಿ ಪದವಿ ಪೂರ್ವ ಕಾಲೇಜು, ಸಿ.ಎಸ್. ಪುರ, ಗುಬ್ಬಿ ತಾಲ್ಲೂಕು, ತುಮಕೂರು ದಕ್ಷಿಣ
21) ಸರ್ಕಾರಿ ಪ್ರೌಢಶಾಲೆ, ಗೋಣಿಮರೂರು, ಮಡಿಕೇರಿ ತಾಲ್ಲೂಕು, ಕೊಡಗು
22) ಸರ್ಕಾರಿ ಪದವಿ ಪೂರ್ವ ಕಾಲೇಜು, ಗೋಲಿ ಅಂಗಡಿ, ಉಡುಪಿ ತಾಲ್ಲೂಕು, ಉಡುಪಿ
23) ಸರ್ಕಾರಿ ಪದವಿ ಪೂರ್ವ ಕಾಲೇಜು, ಉಡುಪಿ, ಉಡುಪಿ ತಾಲ್ಲೂಕು, ಉಡುಪಿ
24) ಸರ್ಕಾರಿ ಪ್ರೌಢಶಾಲೆ, ಗೋಕರ್ಣ, ಔರಾದ್ ತಾಲ್ಲೂಕು, ಬೀದರ್
25) ಸರ್ಕಾರಿ ಪದವಿ ಪೂರ್ವ ಕಾಲೇಜು, ಕಲ್ಲುದಾಸರಹಳ್ಳಿ, ಆಲೂರು ಹಾಸನ
26) ಸರ್ಕಾರಿ ಪ್ರೌಢಶಾಲೆ, ವೆಲ್ಲಿಕ್ಕಾರು, ಮೂಡಬಿದ್ರೆ, ಮಂಗಳೂರು
27) ಸರ್ಕಾರಿ ಪ್ರೌಢಶಾಲೆ, ಎಲಿಮಲೆ, ಸುಳ್ಯ, ಮಂಗಳೂರು
28) ಸರ್ಕಾರಿ ಪದವಿ ಪೂರ್ವ ಕಾಲೇಜು, ದೇವಲಾಪುರ, ಹೊಸಕೋಟೆ ಬೆಂಗಳೂರು ಗ್ರಾಮಾಂತರ
29) ಸರ್ಕಾರಿ ಪ್ರೌಢಶಾಲೆ, ಜಡಿಗೇನಹಳ್ಳಿ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ
30) ಸರ್ಕಾರಿ ಪ್ರೌಢಶಾಲೆ, ಸಾದೇನಹಳ್ಳಿ, ಬೇಲೂರು ತಾಲ್ಲೂಕು, ಹಾಸನ
31) ಸರ್ಕಾರಿ ಪದವಿ ಪೂರ್ವ ಕಾಲೇಜು, ವೀರಾಜಪೇಟೆ ತಾಲ್ಲೂಕು, ಕೊಡಗು
32) ಸರ್ಕಾರಿ ಪ್ರೌಢಶಾಲೆ, ಸೋಮಯಾಜಲುಪಲ್ಲಿ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ
33) ಸರ್ಕಾರಿ ಪ್ರೌಢಶಾಲೆ, ಮುಚಳಂಬ, ಬಸವಕಲ್ಯಾಣ ತಾಲ್ಲೂಕು, ಬೀದರ್
34) ಸರ್ಕಾರಿ ಪದವಿ ಪೂರ್ವ ಕಾಲೇಜು, ಮದರುಗಡಿ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ
35) ಸರ್ಕಾರಿ ಪದವಿ ಪೂರ್ವ ಕಾಲೇಜು, ವೀರ್ಹಾ, ಹುಮ್ನಾಬಾದ್, ಬೀದರ್
36) ಸರ್ಕಾರಿ ಪ್ರೌಢಶಾಲೆ, ಗೇರುಕಟ್ಟೆ, ಬೆಳ್ತಂಗಡಿ ತಾಲ್ಲೂಕು, ಮಂಗಳೂರು
37) ಸರ್ಕಾರಿ ಪ್ರೌಢಶಾಲೆ, ಜಿನ್ನಹಳ್ಳಿ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ
38) ಸರ್ಕಾರಿ ಪ್ರೌಢಶಾಲೆ, ವಲಕಾಡು, ಉಡುಪಿ ತಾಲ್ಲೂಕು, ಉಡುಪಿ
39) ಸರ್ಕಾರಿ ಪ್ರೌಢಶಾಲೆ, ಯಡಮಂಗಲ, ಸುಳ್ಯ ತಾಲ್ಲೂಕು, ಮಂಗಳೂರು
40) ಸರ್ಕಾರಿ ಪದವಿ ಪೂರ್ವ ಕಾಲೇಜು, ಕುದೇರು, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ
41) ಸರ್ಕಾರಿ ಪ್ರೌಢಶಾಲೆ, ಸೋಮವಾರಪೇಟೆ, ಕೊಡಗು
42) ಸರ್ಕಾರಿ ಪ್ರೌಢಶಾಲೆ, ಚಿತ್ತಾಪು, ಮಂಗಳೂರು ತಾಲ್ಲೂಕು, ಮಂಗಳೂರು
43) ಸರ್ಕಾರಿ ಪದವಿ ಪೂರ್ವ ಕಾಲೇಜು, ಚಿಟಗುಪ್ಪ, ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ
44) ಸರ್ಕಾರಿ ಪದವಿ ಪೂರ್ವ ಕಾಲೇಜು, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ
45) ಸರ್ಕಾರಿ ಪದವಿ ಪೂರ್ವ ಕಾಲೇಜು, ಪುತ್ತೂರು ತಾಲ್ಲೂಕು, ಮಂಗಳೂರು
46) ಸರ್ಕಾರಿ ಪ್ರೌಢಶಾಲೆ, ಕ್ಯಾಸಂಬಳ್ಳಿ, ಕೆಜಿಎಫ್, ಕೋಲಾರ
47) ಸರ್ಕಾರಿ ಪದವಿ ಪೂರ್ವ ಕಾಲೇಜು, ಬಾಲಕರ, ತುಮಕೂರು, ತುಮಕೂರು ಜಿಲ್ಲೆ
48) ಸರ್ಕಾರಿ ಪದವಿ ಪೂರ್ವ ಕಾಲೇಜು, ದಡಿನಾಯಕನದೊಡ್ಡಿ, ಮಾಲೂರು ತಾಲ್ಲೂಕು, ಕೋಲಾರ
49) ಸರ್ಕಾರಿ ಪದವಿ ಪೂರ್ವ ಕಾಲೇಜು, ಕೊಕ್ಕರಣೆ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ
50) ಸರ್ಕಾರಿ ಪದವಿ ಪೂರ್ವ ಕಾಲೇಜು, ದಬ್ಬೆಗಟ್ಟ, ತುರುವೆಕೆರೆ ತಾಲ್ಲೂಕು, ತುಮಕೂರು
51) ಸರ್ಕಾರಿ ಪದವಿ ಪೂರ್ವ ಕಾಲೇಜು, ಕಂಬದಕೋಣೆ, ಕುಂದಾಪುರ ತಾಲ್ಲೂಕು, ಉಡುಪಿ
52) ಸರ್ಕಾರಿ ಪದವಿ ಪೂರ್ವ ಕಾಲೇಜು, ಬಿಡಕಲಿಕಟ್ಟೆ, ಕುಂದಾಪುರ ತಾಲ್ಲೂಕು, ಉಡುಪಿ
53) ಸರ್ಕಾರಿ ಪ್ರೌಢಶಾಲೆ, ಅಪ್ಪಿಹಳ್ಳಿ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ

54) ಸರ್ಕಾರಿ ಪದವಿ ಪೂರ್ವ ಕಾಲೇಜು, ಬಿಡಕಲ್‌ಕಟ್ಟೆ, ಕುಂದಾಪುರ ತಾಲ್ಲೂಕು, ಉಡುಪಿ
55) ಬಿಇಓ ಕಛೇರಿ, ಕಾರ್ಕಳ, ಉಡುಪಿ ಜಿಲ್ಲೆ
56) ಸರ್ಕಾರಿ ಕಿರಿಯ ಕಾಲೇಜು ರಾಯಲಪಾಡು ಶ್ರೀನಿವಾಸಪುರ ತಾಲ್ಲೂಕು, ಕೋಲಾರ
57) ಸರ್ಕಾರಿ ಪ್ರೌಢಶಾಲೆ, ಉಳ್ಳೂರು, ಸಾಗರ ಶಿವಮೊಗ್ಗ
58) ಸರ್ಕಾರಿ ಪ್ರೌಢಶಾಲೆ, ಚವರಾದಾಬಕ್ತಾ, ಔರಾದ್ ತಾಲ್ಲೂಕು, ಬೀದರ್ ಜಿಲ್ಲೆ
59) ಬಿಇಓ ಕಛೇರಿ, ಹೊನ್ನಾಳಿ, ದಾವಣಗೆರೆ ಜಿಲ್ಲೆ
60) ಸರ್ಕಾರಿ ಪ್ರೌಢಶಾಲೆ, ಕಳವಡಿ, ಕಾರವಾರ, ಉತ್ತರ ಕನ್ನಡ ಜಿಲ್ಲೆ
61) ಸರ್ಕಾರಿ ಪದವಿ ಪೂರ್ವ ಕಾಲೇಜು, ಕುಷ್ಟಗಿ, ಕೊಪ್ಪಳ ಜಿಲ್ಲೆ
62) ಸರ್ಕಾರಿ ಪ್ರೌಢಶಾಲೆ, ಹೊನ್ನವಳ್ಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ
63) ಬಿಇಓ ಕಛೇರಿ, ದಕ್ಷಿಣ ವಲಯ-2, ಬೆಂಗಳೂರು ದಕ್ಷಿಣ ಜಿಲ್ಲೆ
64) ಸರ್ಕಾರಿ ಪದವಿ ಪೂರ್ವ ಕಾಲೇಜು, ಹಳೇಕೋಟೆ, ಬೆಂಗಳೂರು ದಕ್ಷಿಣ ವಲಯ, ಬೆಂಗಳೂರು ದಕ್ಷಿಣ ಜಿಲ್ಲೆ
65) ಜೆ.ಜೆ.ಸಿ. ರಾಬರ್ಟ್‌ಸನ್ ಪೇಟೆ, ಕೆ.ಜಿ.ಎಫ್. ಕೋಲಾರ
66) ಸರ್ಕಾರಿ ಪದವಿ ಪೂರ್ವ ಕಾಲೇಜು, ಪೋಲಿಪುಕಾಪು, ಉಡುಪಿ ತಾಲ್ಲೂಕು, ಉಡುಪಿ
67) ಸರ್ಕಾರಿ ಕಿರಿಯ ಕಾಲೇಜು, ರಾಬರ್ಟ್‌ಸನ್‌ಪೇಟೆ, ಕೆ.ಜಿ.ಎಫ್., ಕೋಲಾರ ಜಿಲ್ಲೆ
68) ಸರ್ಕಾರಿ ಪ್ರೌಢಶಾಲೆ, ನಿಟ್ಟೂರು ಬಾಲ್ಕಿ, ಬೀದರ್ ಜಿಲ್ಲೆ
69) ಸರ್ಕಾರಿ ಪದವಿ ಪೂರ್ವ ಕಾಲೇಜು, ಸವಣೂರು, ಪುತ್ತೂರು ತಾಲ್ಲೂಕು, ಮಂಗಳೂರು
70) ಸರ್ಕಾರಿ ಪ್ರೌಢಶಾಲೆ, ಬಗದಲಿ, ಬೀದರ್ ತಾಲ್ಲೂಕು, ಬೀದರ್ ಜಿಲ್ಲೆ
71) ಸರ್ಕಾರಿ ಪ್ರೌಢಶಾಲೆ, ಕಣಜಿ, ಬಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ
72) ಬಿಇಓ ಕಛೇರಿ, ಬೆಳ್ತಂಗಡಿ ತಾಲ್ಲೂಕು, ಮಂಗಳೂರು
73) ಸರ್ಕಾರಿ ಪದವಿ ಪೂರ್ವ ಕಾಲೇಜು, ವೇಣೂರು, ಕಾಲೇಜು ವಿಭಾಗ ಬೆಳ್ತಂಗಡಿ, ಮಂಗಳೂರು
74) ಸರ್ಕಾರಿ ಪದವಿ ಪೂರ್ವ ಕಾಲೇಜು, ಹಳೆಯಂಗಡಿ, ಮಂಗಳೂರು ತಾಲ್ಲೂಕು, ಮಂಗಳೂರು
75) ಸರ್ಕಾರಿ ಪ್ರೌಢಶಾಲೆ, ಕಣಜಾರು, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ
76) ಸರ್ಕಾರಿ ಪ್ರೌಢಶಾಲೆ, ಮಲ್ಲುರು, ಉಡುಪಿ ತಾಲ್ಲೂಕು, ಉಡುಪಿ
77) ಸರ್ಕಾರಿ ಪದವಿ ಪೂರ್ವ ಕಾಲೇಜು, ಮಡಿಕೇರಿ, ಕೊಡಗು
78) ಸರ್ಕಾರಿ ಪದವಿ ಪೂರ್ವ ಕಾಲೇಜು, ಸಜೀಪಮೂಡ ಬಂಟ್ವಾಳ ತಾಲ್ಲೂಕು, ಮಂಗಳೂರು
79) ಸರ್ಕಾರಿ ಪ್ರೌಢಶಾಲೆ, ಬಂಗಾರು ತಿರುಪತಿ, ಬಂಗಾರಪೇಟೆ, ಕೋಲಾರ
80) ಸರ್ಕಾರಿ ಪದವಿ ಪೂರ್ವ ಕಾಲೇಜು, ಹಳೇಕೋಟೆ, ಬೆಂಗಳೂರು ದಕ್ಷಿಣ ವಲಯ-28, ಬೆಂಗಳೂರು ದಕ್ಷಿಣ
81) ಸರ್ಕಾರಿ ಪ್ರೌಢಶಾಲೆ, ಸರ್ವೆ ಪುತ್ತೂರು, ಮಂಗಳೂರು
82) ಸರ್ಕಾರಿ ಪ್ರೌಢಶಾಲೆ, ಕೋಯಿಲಾ, ಬಂಟ್ವಾಳ ತಾಲ್ಲೂಕು, ಮಂಗಳೂರು
83) ಸರ್ಕಾರಿ ಪ್ರೌಢಶಾಲೆ, ಮಲ್ಲರಕಾಪು, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ
84) ಸರ್ಕಾರಿ ಪ್ರೌಢಶಾಲೆ, ತೆಲ್ಲಾರು, ಕಾರ್ಕಳ ತಾಲ್ಲೂಕು, ಉಡುಪಿ ಜಿಲ್ಲೆ
85) ಸರ್ಕಾರಿ ಪ್ರೌಢಶಾಲೆ, ಮಾಲ್ದಾರೆ, ಮೈಸೂರು ತಾಲ್ಲೂಕು, ಕೊಡಗು ಜಿಲ್ಲೆ
86) ಬಿಇಓ ಕಛೇರಿ, ಮೂಡಬಿದ್ರೆ, ಮಂಗಳೂರು
87) ಸರ್ಕಾರಿ ಪ್ರೌಢಶಾಲೆ, ಹೇರಿದ್ವಾಪನಹಳ್ಳಿ, ಕನಕಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ
88) ಸರ್ಕಾರಿ ಪ್ರೌಢಶಾಲೆ, ಯರಮಲುಕೆಂಕ, ಉಡುಪಿ ತಾಲ್ಲೂಕು, ಉಡುಪಿ
89) ಬಿಇಓ ಕಛೇರಿ, ಸುಳ್ಯ, ಮಂಗಳೂರು
90) ಬಿಇಓ ಕಛೇರಿ, ಮಂಗಳೂರು ತಾಲ್ಲೂಕು, ಮಂಗಳೂರು
91) ಸರ್ಕಾರಿ ಪದವಿ ಪೂರ್ವ ಕಾಲೇಜು, ಉಪ್ಪಿನಂಗಡಿ, ಪುಸ್ತೂರು ತಾಲ್ಲೂಕು, ಮಂಗಳೂರು
92) ಬಿಇಓ ಕಛೇರಿ, ಬೆಂಗಳೂರು ದಕ್ಷಿಣ ವಲಯ-2, ಬೆಂಗಳೂರು ದಕ್ಷಿಣ ಜಿಲ್ಲೆ
93) ಸರ್ಕಾರಿ ಪ್ರೌಢಶಾಲೆ, ಕೊಣಾಲು, ಪುಸ್ತೂರು ತಾಲ್ಲೂಕು, ಮಂಗಳೂರು
94) ಡಯಟ್, ತುಮಕೂರು ತಾಲ್ಲೂಕು, ತುಮಕೂರು
95) ಸರ್ಕಾರಿ ಪದವಿ ಪೂರ್ವ ಕಾಲೇಜು, ಹಳೆಕೇರೆ, ಬೆಂಗಳೂರು ದಕ್ಷಿಣ ವಲಯ-25, ಬೆಂಗಳೂರು ದಕ್ಷಿಣ
96) ಸರ್ಕಾರಿ ಪ್ರೌಢಶಾಲೆ ಅರಿಕುಂಟೆ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ
97) ಸರ್ಕಾರಿ ಪದವಿ ಪೂರ್ವ ಕಾಲೇಜು, ಹಳೇವಾಣಿವಿಲಾಸ್, ಬೆಂಗಳೂರು ದಕ್ಷಿಣವಲಯ-18, ಬೆಂಗಳೂರು ದಕ್ಷಿಣ ಜಿಲ್ಲೆ

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

## ಅನುಬಂಧ - 2

**ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ರದ್ದುಗೊಳಿಸಬಹುದಾದ ಹುದ್ದೆಗಳ ವಿವರ**

| ಕ್ರ.ಸಂ. | ಕಾಲೇಜಿನ ಹೆಸರು ಮತ್ತು ವಿಳಾಸ | ವೃಂದ / ಹುದ್ದೆ |
|---|---|---|
| 1 | ಪದವಿ ಪೂರ್ವ ಶಿಕ್ಷಣ ನಿರ್ದೇಶಕರು, ಬೆಂಗಳೂರು | ಸಿಸ್ಟಂ ಮ್ಯಾನೇಜರ್ |
| 2 | ಸರ್ಕಾರಿ ಪ.ಪೂ.ಕಾಲೇಜು, ಚಿಕ್ಕನಾಯಕನಹಳ್ಳಿ, ತುಮಕೂರು ಜಿಲ್ಲೆ | ದೈಹಿಕ ಶಿಕ್ಷಕರು |
| 3 | ಸರ್ಕಾರಿ ಪ.ಪೂ.ಕಾಲೇಜು, ಹೊಸಕೋಟೆ, ಬೆಂಗಳೂರು ಗ್ರಾ. ಜಿಲ್ಲೆ | ದೈಹಿಕ ಶಿಕ್ಷಕರು |
| 4 | ಸರ್ಕಾರಿ ಪ.ಪೂ.ಕಾಲೇಜು, ಬೈಂದೂರು, ಕುಂದಾಪುರ ತಾ. ಉಡುಪಿ ಜಿಲ್ಲೆ | ದೈಹಿಕ ಶಿಕ್ಷಕರು |
| 5 | ಸರ್ಕಾರಿ ಪ.ಪೂ.ಕಾಲೇಜು, ಹಳೇಕೋಟೆ, ಚಾಮರಾಜಪೇಟೆ, ಬೆಂಗಳೂರು | ಗ್ರಂಥಪಾಲಕರು |
| 6 | ಬಾಲಕರ ಸರ್ಕಾರಿ ಪ.ಪೂ.ಕಾಲೇಜು, ರಾಮನಗರ, ಬೆಂ. ಗ್ರಾ. | ಗ್ರಂಥಪಾಲಕರು |
| 7 | ಸರ್ಕಾರಿ ಪ.ಪೂ.ಕಾಲೇಜು, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ | ಗ್ರಂಥಪಾಲಕರು |
| 8 | ಬಾಲಕರ ಸರ್ಕಾರಿ ಪ.ಪೂ.ಕಾಲೇಜು, ನ್ಯಾಮತಿ, ದಾವಣಗೆರೆ ಜಿಲ್ಲೆ | ಗ್ರಂಥಪಾಲಕರು |
| 9 | ಸರ್ಕಾರಿ ಪ.ಪೂ.ಕಾಲೇಜು, ಸಂತೆಬೆನ್ನೂರು, ದಾವಣಗೆರೆ ಜಿಲ್ಲೆ | ಗ್ರಂಥಪಾಲಕರು |
| 10 | ಬಾಲಕರ ಸರ್ಕಾರಿ ಪ.ಪೂ.ಕಾಲೇಜು, ಚಿತ್ರದುರ್ಗ | ಗ್ರಂಥಪಾಲಕರು |
| 11 | ಸರ್ಕಾರಿ ಪ.ಪೂ.ಕಾಲೇಜು, ನುಗ್ಗೇಹಳ್ಳಿ, ಹಾಸನ ಜಿಲ್ಲೆ | ಗ್ರಂಥಪಾಲಕರು |
| 12 | ಸರ್ಕಾರಿ ಪ.ಪೂ.ಕಾಲೇಜು, ಬೆಸಗರಹಳ್ಳಿ, ಮಂಡ್ಯ ಜಿಲ್ಲೆ | ಗ್ರಂಥಪಾಲಕರು |
| 13 | ಸರ್ಕಾರಿ (ಮಾಪು) ಪ.ಪೂ.ಕಾಲೇಜು, ಮಂಡ್ಯ | ಗ್ರಂಥಪಾಲಕರು |
| 14 | ಸರ್ಕಾರಿ ಪ.ಪೂ.ಕಾಲೇಜು, ಮಲ್ಕಿ, ದಕ್ಷಿಣ ಕನ್ನಡ ಜಿಲ್ಲೆ | ಗ್ರಂಥಪಾಲಕರು |
| 15 | ಸರ್ಕಾರಿ ಪ.ಪೂ.ಕಾಲೇಜು, ನಾವುಂದ, ಕುಂದಾಪುರ ತಾ. ಉಡುಪಿ ಜಿಲ್ಲೆ | ಗ್ರಂಥಪಾಲಕರು |
| 16 | ಸರ್ಕಾರಿ ಪ.ಪೂ.ಕಾಲೇಜು, ಕಾಟಿಪಳ್ಳ, ದಕ್ಷಿಣ ಕನ್ನಡ ಜಿಲ್ಲೆ | ಗ್ರಂಥಪಾಲಕರು |
| 17 | ಸರ್ಕಾರಿ ಪ.ಪೂ.ಕಾಲೇಜು, ಕೊಕ್ಕರ್ಣೆ, ಉಡುಪಿ ಜಿಲ್ಲೆ | ಗ್ರಂಥಪಾಲಕರು |
| 18 | ಸರ್ಕಾರಿ ಪ.ಪೂ.ಕಾಲೇಜು, ಬೆಳ್ಮಣ್ಣು ಕಾರ್ಕಳ ತಾ. ಉಡುಪಿ ಜಿಲ್ಲೆ | ಗ್ರಂಥಪಾಲಕರು |
| 19 | ಸರ್ಕಾರಿ ಪ.ಪೂ.ಕಾಲೇಜು, ಪಟ್ಟನಾಯಕನಹಳ್ಳಿ, ಶಿರಾ ತಾ. ತುಮಕೂರು ಜಿಲ್ಲೆ | ಗ್ರಂಥಪಾಲಕರು |
| 20 | ಸರ್ಕಾರಿ ಪ.ಪೂ.ಕಾಲೇಜು, ಬಿಳಿಗೆರೆ, ತಿಪಟೂರು ತಾ. ತುಮಕೂರು ಜಿಲ್ಲೆ | ಗ್ರಂಥಪಾಲಕರು |
| 21 | ಬಾಲಕರ ಸರ್ಕಾರಿ ಪ.ಪೂ.ಕಾಲೇಜು, ಬಂಗಾರಪೇಟೆ, ಕೋಲಾರ ಜಿಲ್ಲೆ | ಗ್ರಂಥಪಾಲಕರು |
| 22 | ಸರ್ಕಾರಿ ಪ.ಪೂ.ಕಾಲೇಜು, ವಿರಾಜಪೇಟೆ, ಕೊಡಗು ಜಿಲ್ಲೆ | ಗ್ರಂಥಪಾಲಕರು |
| 23 | ಸರ್ಕಾರಿ ಪ.ಪೂ.ಕಾಲೇಜು, ಗುರುಪುರ, ದಕ್ಷಿಣ ಕನ್ನಡ ಜಿಲ್ಲೆ | ಸಿ.ಸಿ.ಟಿ. |
| 24 | ಸರ್ಕಾರಿ ಪ.ಪೂ.ಕಾಲೇಜು, ಬೈಂದೂರು, ಉಡುಪಿ ಜಿಲ್ಲೆ | ಸಿ.ಸಿ.ಟಿ. |
| 25 | ಸರ್ಕಾರಿ ಪ.ಪೂ.ಕಾಲೇಜು, ಬೆಳ್ಳಾರೆ, ಸುಳ್ಯ ತಾ. ದಕ್ಷಿಣ ಕನ್ನಡ ಜಿಲ್ಲೆ | ದ್ವಿ.ದ.ಸ. |
| 26 | ಸರ್ಕಾರಿ ಪ.ಪೂ.ಕಾಲೇಜು, ಪೊನ್ನಂಪೇಟೆ, ಕೊಡಗು ಜಿಲ್ಲೆ | ಪರಿಚಾರಕ |
| 27 | ಸರ್ಕಾರಿ ಪ.ಪೂ.ಕಾಲೇಜು, ಎರ್ಮಾಳುಬಾಡ, ಉಡುಪಿ ಜಿಲ್ಲೆ | ಗ್ರೂಪ್ ಡಿ |
| 28 | ಸರ್ಕಾರಿ ಪ.ಪೂ.ಕಾಲೇಜು, ಉಪ್ಪುಂದ, ಕುಂದಾಪುರ ತಾ. ಉಡುಪಿ ಜಿಲ್ಲೆ | ಗ್ರೂಪ್ ಡಿ |
| 29 | ಸರ್ಕಾರಿ ಪ.ಪೂ.ಕಾಲೇಜು, ಮಾಳೂರು, ತೀರ್ಥಹಳ್ಳಿ ತಾ. ಶಿವಮೊಗ್ಗ ಜಿಲ್ಲೆ | ಗ್ರೂಪ್ ಡಿ |
| 30 | ಸರ್ಕಾರಿ ಪ.ಪೂ.ಕಾಲೇಜು, ಸಿ.ಎಸ್. ಪುರ, ಗುಬ್ಬಿ ತಾ. ತುಮಕೂರು ಜಿಲ್ಲೆ | ಗ್ರೂಪ್ ಡಿ |
| 31 | ಸರ್ಕಾರಿ ಪ.ಪೂ.ಕಾಲೇಜು, ಮಲ್ಪೆ, ಉಡುಪಿ ಜಿಲ್ಲೆ | ಗ್ರೂಪ್ ಡಿ |

**ಸ್ವರ್ಣಲತ ಎಂ. ಭಂಡಾರೆ**

ಪಿ.ಆರ್. 686 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ: 3.5.2005ರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 49 ಸೇಇಮು 2004.

2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 2004, ದಿನಾಂಕ: 3.1.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಹುದ್ದೆಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ. ಶ್ರೀಕಂಠೇಶ್ವರ ಇವರನ್ನು ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಿದ ನಂತರವೂ ನಿಯೋಜನೆ ಮೇಲೆ ಮುಂದುವರಿಯಲು ಅನುಕೂಲವಾಗುವಂತೆ ಸದರಿ ಹುದ್ದೆಯನ್ನು ರೂ.12800-16720ರ ವೇತನ ಶ್ರೇಣಿಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ ಇನ್ನೊಂದು ವರ್ಷ ಮುಂದುವರಿಸುವಂತೆ ಕೋರಲಾಗಿದೆ.

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 31.3.2005 ರವರೆಗೆ ಮುಂದುವರೆಸಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸಸಿವಿ 2005, ಬೆಂಗಳೂರು, ದಿನಾಂಕ: 6ನೇ ಮೇ 2005**

ಶಿಕ್ಷಣ ಇಲಾಖೆಯ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 1.4.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಯಲು ಮಂಜೂರಾತಿ ನೀಡಿದೆ. ಹಾಗೂ ಸದರಿ ಹುದ್ದೆಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ. ಶ್ರೀ ಕಂಠೇಶ್ವರರವರಿಗೆ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಿದ ನಂತರವೂ ನಿಯೋಜನೆ ಮೇಲೆ ಮುಂದುವರಿಯಲು ಆ ಹುದ್ದೆಯನ್ನು ಸದರಿಯವರಿಗೆ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ಹೊಂದಿ ಕಾರ್ಯಭಾರ ವಹಿಸಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 780 ವೆಚ್ಚ-5/2005, ದಿನಾಂಕ: 2.5.2005ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 687

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಎರಡು ಅಪರ ಕಾರ್ಯದರ್ಶಿ ಹುದ್ದೆಗಳನ್ನು ಜಂಟಿ ಕಾರ್ಯದರ್ಶಿ ಹುದ್ದೆಗಳೆಂದು ನಿಮ್ನೀಕರಣ - ನೇಮಕಾತಿ ವಿಧಾನ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** 1) ದಿನಾಂಕ: 1.8.96ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 38 ಸೇನಿಇ 96.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 141 ಸಅಸೇ 2004, ದಿನಾಂಕ: 5.3.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 5.3.2005ರ ಆದೇಶದಲ್ಲಿ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ 3 ಅಪರ ಪ್ರಾರೂಪಕಾರ ಹಾಗೂ ಪದನಿಮಿತ್ತ ಅಪರ ಕಾರ್ಯದರ್ಶಿ ಹುದ್ದೆಗಳಲ್ಲಿ 2 ಅಪರ ಪ್ರಾರೂಪಕಾರ ಹಾಗೂ ಪದನಿಮಿತ್ತ ಅಪರ ಕಾರ್ಯದರ್ಶಿ ಹುದ್ದೆಗಳನ್ನು ಜಂಟಿ ಪ್ರಾರೂಪಕಾರ ಮತ್ತು ಪದನಿಮಿತ್ತ ಜಂಟಿ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸಲಾಗಿದೆ. ಈ ರೀತಿ ನಿಮ್ನೀಕರಿಸಿದ ಹುದ್ದೆಗಳಿಗೆ ನೇಮಕಾತಿ ವಿಧಾನ ನಿಗದಿ ಪಡಿಸುವ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 1.8.96ರ ಅಧಿಕೃತ ಜ್ಞಾಪನದನ್ವಯ ಹೊಸದಾಗಿ ಸೃಜಿಸಿರುವ ಹುದ್ದೆಗಳಿಗೆ ಅಥವಾ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸದೇ ಇರುವ ಹುದ್ದೆಗಳಿಗೆ ಕಾರ್ಯಕಾರಿ ಆದೇಶವನ್ನು ಹೊರಡಿಸುವುದರ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸಬಹುದಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 131 ಸಅಸೇ 2004, ಬೆಂಗಳೂರು, ದಿನಾಂಕ: 7ನೇ ಮೇ 2005**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 141 ಸೆಅಸೇ 2004 ದಿನಾಂಕ: 5.3.2005 ರನ್ವಯ ನಿಮ್ನೀಕರಣಗೊಂಡ 2 ಜಂಟಿ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಹುದ್ದೆಗಳಿಗೆ ಈ ಕೆಳಗಿನಂತೆ ನೇಮಕಾತಿ ವಿಧಾನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗದಿಪಡಿಸಲಾಗಿದೆ.

| | | |
|---|---|---|
| Joint Draftsman and Ex-officio Joint Secretary to Government, Department of Parliamentary Affairs and Legislation (Rs.12800-16720) | By promotion from the cadre of Assistant Draftsman and Ex-officio Deputy Secretary to Government Department of Parliamentary Affairs and Legislation | For appointment by promotion: Must have put in a service of not less than seven years in the cadre of Assistant Draftsman and Ex-officio Under Secretary to Government, Department of Parliamentary Affairs and Legislation of which at least one year as Assistant Draftsman and Ex-officio Deputy Secretary to Government, Department of Parliamentary Affairs and Legislation. |

ಸಂಬಂಧಿಸಿದ ವೃಂದ ಮತ್ತು ನೇಮಕಾತಿ ನಿಯಮಾವಳಿಗೆ ಅವಶ್ಯ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು. ಈ ಕಾರ್ಯಕಾರಿ ಆದೇಶವು 6 ತಿಂಗಳ ಅವಧಿಗೆ ಮಾತ್ರ ಜಾರಿಯಲ್ಲಿರುತ್ತದೆ. ಈ ಆದೇಶವನ್ನು ಸಿ.ಆ.ಸು.ಇ. (ಸೇವಾ ನಿಯಮಗಳು-ಡಿ) ಶಾಖೆಯು ಟಿಪ್ಪಣಿ ಸಂಖ್ಯೆ: ಸಿಆಸುಇ 5 ಸೇನಿಡಿ 2005, ದಿನಾಂಕ: 27.4.2005 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 688

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ನೂರ್ ಮಹಮದ್ ಪನಾಲಿ, ಕೆಎಎಸ್, ನಿರ್ದೇಶಕರು, ಉರ್ದು ಮತ್ತು ಅಲ್ಪ ಸಂಖ್ಯಾತ ಭಾಷಾ ಶಾಲೆಗಳ ನಿರ್ದೇಶನಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ವಿರುದ್ಧ ದಾಖಲಾದ ಟ್ರಾಪ್ ಪ್ರಕರಣ ಮತ್ತು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ಲೋಕಾಯುಕ್ತ ಪೊಲೀಸ್ ಮಹಾ ನಿರೀಕ್ಷಕರ ಪತ್ರ ಸಂಖ್ಯೆ: ಲೋಕ್.ಐಎನ್‌ವಿ(ಜಿ). ಸಿಟಿ. ಕ್ರೈಂ.12.2005, ದಿನಾಂಕ: 29.4.2005.

**ಪ್ರಸ್ತಾವನೆ:**

ಶ್ರೀ ಶರಣ ಬಸವೇಶ್ವರ ವಿದ್ಯಾ ಸಂಸ್ಥೆ, ದಾವಣಗೆರೆ ಜಿಲ್ಲೆಯ ಕಾರ್ಯದರ್ಶಿಯಾದ ಶ್ರೀ ವಸಂತರವರು ಕರ್ನಾಟಕ ಲೋಕಾಯುಕ್ತ ಪೊಲೀಸ್ ಉಪಾಧೀಕ್ಷಕರಿಗೆ ಫಿರ್ಯಾದು ಸಲ್ಲಿಸಿ ಶ್ರೀ ನೂರ್ ಮಹಮದ್ ಪನಾಲಿ, ನಿರ್ದೇಶಕರು, ಉರ್ದು ಮತ್ತು ಅಲ್ಪ ಸಂಖ್ಯಾತ ಭಾಷಾ ಶಾಲೆಗಳ

ನಿರ್ದೇಶನಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ ರವರು ಅವರ ವಿದ್ಯಾ ಸಂಸ್ಥೆಯ 2003-04ನೇ ಸಾಲಿನ 2ನೇ ಕಂತಿನ ಹಾಗೂ 2004-05ನೇ ಸಾಲಿನ 1ನೇ ಕಂತಿನ ಅನುದಾನ ಒಟ್ಟು ರೂ.22,00,000/- ಹಣ ಬಿಡುಗಡೆ ಮಾಡಲು ರೂ.50,000/- ಗಳನ್ನು ಲಂಚವಾಗಿ ಕೇಳಿ ಅದರಲ್ಲಿ ಮೊದಲನೇ ಕಂತಾಗಿ 16.4.2005 ರಂದು ರೂ.35,000/- ಗಳನ್ನು ಪಡೆದುಕೊಂಡು ಇನ್ನೂ ರೂ.10,000/- ಲಂಚದ ಹಣಕ್ಕಾಗಿ ಒತ್ತಾಯ ಮಾಡುತ್ತಿದ್ದಾರೆಂದು ಮಾಡಿದ ಮನವಿಯ ಮೇರೆಗೆ ಲೋಕಾಯುಕ್ತ ಪೊಲೀಸರು ಭ್ರಷ್ಟಾಚಾರ ವಿರೋಧ ಕಾಯ್ದೆ 1988 ಕಲಂ-7, 3(1)(ಡಿ) ಸಹವಾಚನ ಕಲಂ 13(2) ಅಡಿಯಲ್ಲಿ ಮೊಕದ್ದಮೆ ದಾಖಲಿಸಿಕೊಂಡಿರುವುದಾಗಿ ಮೇಲೆ ಓದಲಾದ ಕರ್ನಾಟಕ ಲೋಕಾಯುಕ್ತ ಪೊಲೀಸ್ ಮಹಾ ನಿರೀಕ್ಷಕರ ಪತ್ರ ದಿನಾಂಕ: 29.4.2005ರ ಪತ್ರದಲ್ಲಿ ವರದಿಯಾಗಿದೆ. ಸದರಿ ವರದಿಯಲ್ಲಿ ಈ ಕೆಳಕಂಡ ಅಂಶಗಳು ಬೆಳಕಿಗೆ ಬರುತ್ತವೆ.

ಅದರಂತೆ ದಿನಾಂಕ: 23.4.2005 ರಂದು ಶ್ರೀ ನೂರ್ ಮಹಮದ್ ಪನಾಲಿ, ಕೆಎಎಸ್, ನಿರ್ದೇಶಕರು, ಉರ್ದು ಮತ್ತು ಅಲ್ಪ ಸಂಖ್ಯಾತ ಭಾಷಾ ಶಾಲೆಗಳ ನಿರ್ದೇಶನಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ನಿವಾಸ ಸಂಖ್ಯೆ: 10, 5ನೇ ಅಡ್ಡ ರಸ್ತೆ, 3ನೇ ಮುಖ್ಯ ರಸ್ತೆ, ಶಾಸ್ತ್ರಿ ನಗರ, ವಿಮಾನಪುರ ಅಂಚೆ, ಬೆಂಗಳೂರು ಇಲ್ಲಿ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಯಲ್ಲಿ ರೂ.10,000/- ಗಳ ಲಂಚದ ಹಣವನ್ನು ಫಿರ್ಯಾದುದಾರರಿಂದ ಪಡೆಯುತ್ತಿರುವಾಗ ಲಂಚದ ಹಣದೊಡನೆ ಸಿಕ್ಕಿ ಹಾಕಿಕೊಂಡಿರುತ್ತಾರೆ. ಫಿನಾಪ್ತಲಿನ್ ಪರೀಕ್ಷೆಗೆ ಅಧಿಕಾರಿಯನ್ನು ಒಳಪಡಿಸಿದಾಗ ಅದು ನಕಾರಾತ್ಮಕವಾಗಿ ಪ್ರತಿಕ್ರಿಯಿಸಿದೆಯೆಂದು ಸಹ ವರದಿಯಾಗಿದೆ ಹಾಗೂ ಘಟನಾ ಸಮಯದಲ್ಲಿ 15 ಜನ ಬೇರೆ ವ್ಯಕ್ತಿಗಳು ಹಾಜರಿದ್ದು ಅವರು ಸಹ ವಿದ್ಯಾ ಸಂಸ್ಥೆಗಳನ್ನು ನಡೆಸುತ್ತಿರುವವರಾಗಿದ್ದು ಅನುದಾನ ಬಿಡುಗಡೆಗಾಗಿ ಮೇಲ್ಕಂಡ ಅಧಿಕಾರಿಯವರನ್ನು ಭೇಟಿಯಾಗಿ ವಿವಿಧ ರೀತಿಯಲ್ಲಿ ಲಂಚದ ಹಣ ಕೊಟ್ಟಿರುವುದಾಗಿ ಹೇಳಿಕೆ ನೀಡಿರುತ್ತಾರೆ.

ಆಪಾದಿತರ ಮನೆಯನ್ನು ಶೋಧಿಸಲಾಗಿ ಒಟ್ಟು ರೂ.1,15,000/- ನಗದು ದೊರೆತಿದ್ದು ಈ ಬಗ್ಗೆ ಆರೋಪಿತರು ಸಮಂಜಸವಾದ ವಿವರಣೆ ನೀಡಿಲ್ಲವೆಂದು ಮತ್ತು ಯಾವುದೇ ದಾಖಲೆಗಳನ್ನು ಒದಗಿಸಿಲ್ಲವೆಂದು ಆರೋಪಿತರು ಸಾರ್ವಜನಿಕರಿಂದ ಹಣ ಪಡೆಯುತ್ತಾ ಭ್ರಷ್ಟಾಚಾರದಲ್ಲಿ ತೊಡಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆಂದು ಉಲ್ಲೇಖದ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಈ ಸಂಬಂಧ ಶ್ರೀ ನೂರ್ ಮಹಮದ್ ಪನಾಲಿ, ಕೆಎಎಸ್ ಅಧಿಕಾರಿಯವರನ್ನು 23ನೇ ಅಡಿಷನಲ್ ಸಿಟಿ ಸಿವಿಲ್ ಮತ್ತು ಸೆಷನ್ಸ್ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದು ನ್ಯಾಯಾಲಯವು ಆರೋಪಿತರನ್ನು ನ್ಯಾಯಾಂಗ ಬಂಧನದಲ್ಲಿರಿಸಿದೆ.

ಆಪಾದಿತ ಸಾರ್ವಜನಿಕ ಅಧಿಕಾರಿ ಶ್ರೀ ನೂರ್ ಮಹಮದ್ ಪನಾಲಿ ಇವರ ಪ್ರಕರಣದ ಸುಗಮ ತನಿಖೆಗೆ ಅಡ್ಡಿ ಉಂಟು ಮಾಡುವ, ತನಿಖೆಯಲ್ಲಿ ಹಸ್ತಕ್ಷೇಪ ಮಾಡುವ ಮತ್ತು ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಇವರನ್ನು ಕೂಡಲೇ ಅಮಾನತ್ತಿನಲ್ಲಿಡಲು ಮೇಲೆ ಓದಲಾದ ಪತ್ರದಲ್ಲಿ ಲೋಕಾಯುಕ್ತ ಪೊಲೀಸ್ ಮಹಾ ನಿರ್ದೇಶಕರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಲೋಕಾಯುಕ್ತ ಪೊಲೀಸ್ ಮಹಾ ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಆಪಾದಿತ ಅಧಿಕಾರಿಯು ಪಂಚರ ಸಮಕ್ಷಮ ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ ಸಿಕ್ಕಿ ಬಿದ್ದಿದ್ದರಿಂದಲೂ, ಫಿನಾಪ್ತಲಿನ್ ಪರೀಕ್ಷೆಯಲ್ಲಿ ಸಕಾರಾತ್ಮಕ ಫಲಿತಾಂಶ ಬಂದಿರುವುದರಿಂದಲೂ, ಆರೋಪಿತರ ಮನೆಯಲ್ಲಿ ನೆರೆದಿದ್ದ ಇತರ ವ್ಯಕ್ತಿಗಳೂ ಸಹ ಲಂಚ ನೀಡಿರುವುದಾಗಿ ಹೇಳಿಕೆ ನೀಡಿರುವುದರಿಂದಲೂ, ಆಪಾದಿತರ ಮನೆಯಲ್ಲಿ ರೂ.1,15,000/- ಹಣ ದೊರಕಿದ್ದು ಅದಕ್ಕೆ ಸಮಂಜಸವಾದ ವಿವರಣೆ ಮತ್ತು ದಾಖಲೆಗಳು ಇಲ್ಲದಿರುವುದರಿಂದಲೂ, ಹಾಗೂ ಆಪಾದಿತರು ನ್ಯಾಯಾಂಗ ಬಂಧನದಲ್ಲಿರುವುದರಿಂದಲೂ, ಆಪಾದಿತರ ಭ್ರಷ್ಟಾಚಾರವು ಮೇಲ್ನೋಟಕ್ಕೆ ಬಲಪಡುವುದರಿಂದಲೂ ಪ್ರಕರಣದ ಸುಗಮ ತನಿಖೆಗೆ ಅವಕಾಶ ಕಲ್ಪಿಸುವ ಅವಶ್ಯಕತೆಯನ್ನು ಮನಗಂಡು ಸರ್ಕಾರವು ಶ್ರೀ ಮಹಮದ್ ಪನಾಲಿ ಅವರನ್ನು ಮುಂದಿನ ತನಿಖೆ/ವಿವರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿರಿಸಲು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 66 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 9ನೇ ಮೇ 2005**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ನೂರ್ ಮಹಮದ್ ಪನಾಲಿ, ಕೆಎಎಸ್, ನಿರ್ದೇಶಕರು, ಉರ್ದು ಮತ್ತು ಅಲ್ಪ ಸಂಖ್ಯಾತ ಭಾಷಾ ಶಾಲೆಗಳ ನಿರ್ದೇಶನಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ನ್ಯಾಯಾಂಗ ಬಂಧನದಲ್ಲಿರಿಸಿದ ದಿನಾಂಕದಿಂದಲೇ ಅಂದರೆ ದಿನಾಂಕ: 23.4.2005 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ನೂರ್ ಮಹಮದ್ ಪನಾಲಿ, ಕೆಎಎಸ್, ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 98ರ ನಿಯಮದನ್ವಯ ಜೀವನಾಧಾರದ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ನೂರ್ ಮಹಮದ್ ಪನಾಲಿ ಅವರು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 689

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಬೆಂಗಳೂರು ಸಂಸ್ಥೆಯು ನಡೆಸುವ ತರಬೇತಿ ಕಾರ್ಯಕ್ರಮಗಳಿಗೆ ಕೆ.ಎ.ಎಸ್. ಅಧಿಕಾರಿಗಳನ್ನು ನಿಯೋಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 33 ಇಭಾತ 05, ದಿನಾಂಕ: 28.03.2005, ಅಧೀನ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) ಇವರಿಂದ

**ಪ್ರಸ್ತಾವನೆ:**

ಬೆಂಗಳೂರಿನ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್‌ನಲ್ಲಿ 2005-2006ನೇ ಸಾಲಿನಲ್ಲಿ ನಡೆಯಲಿರುವ ವಿವಿಧ ಅಲ್ಪಾವಧಿ ತರಬೇತಿ ಕಾರ್ಯಕ್ರಮಗಳಿಗೆ ನಿಯೋಜಿಸಲು ಕೆ.ಎ.ಎಸ್. ಅಧಿಕಾರಿಗಳ ಹೆಸರುಗಳನ್ನು ಸೂಚಿಸಿ ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಪ್ರಸ್ತಾಪಿಸಲಾಗಿದೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 143 ಆಸೇಇ 2005, ಬೆಂಗಳೂರು, ದಿನಾಂಕ: 7ನೇ ಮೇ 2005**

ಕರ್ನಾಟಕ ಆಡಳಿತ ಸೇವೆಗೆ ಸೇರಿದ ಈ ಕೆಳಕಂಡ ಅಧಿಕಾರಿಗಳನ್ನು 2005-2006ನೇ ಸಾಲಿನಲ್ಲಿ ಬೆಂಗಳೂರಿನ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್‌ನಲ್ಲಿ ನಡೆಸಲ್ಪಡುವ ಅಲ್ಪಾವಧಿ ತರಬೇತಿ ಕಾರ್ಯಕ್ರಮಕ್ಕೆ ನಿಯೋಜಿಸಿ ಆದೇಶಿಸಿದೆ.

| ಕ್ರ. ಸಂ. | ಅಧಿಕಾರಿಯವರ ಹೆಸರು | ತರಬೇತಿ ವಿಷಯ | ತರಬೇತಿ ನಡೆಯಲಿರುವ ದಿನಾಂಕ | ಷರಾ |
|---|---|---|---|---|
| 01 | ಶ್ರೀ ಜಿ.ಬಿ. ಹಿರೇಮಣಿಯವರ್, ಕೆ.ಎ.ಎಸ್. (ಹಿ.ಶ್ರೇ), ನಿರ್ದೇಶಕರು, (ಎಸ್‌ಇಪಿ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು. | Project Appraisal | 13.06.2005 ರಿಂದ 15.06.2005 | |
| 02 | ಶ್ರೀ ಎಸ್. ಪಾಲಯ್ಯ, ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಮೈಸೂರು. | Finance for non Finance Managers | 07.11.2005 ರಿಂದ 12.11.2005 | |
| 03 | ಶ್ರೀ ಎಸ್.ಎಂ. ಸೊನ್ನದ್, ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರು, ಬೆಳಗಾವಿ. | Finance for non Finance Managers | 07.11.2005 ರಿಂದ 12.11.2005 | |
| 04 | ಶ್ರೀ ಶಿವರಾಜ್, ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಬಿಜಾಪುರ. | Finance for non Finance Managers | 07.11.2005 ರಿಂದ 12.11.2005 | |
| 05 | ಶ್ರೀ ಎಸ್. ರಾಜಾರಾಂ, ಉಪ ಕಾರ್ಯದರ್ಶಿಗಳು, ಜಿಲ್ಲಾ ಪಂಚಾಯತ್, ತುಮಕೂರು. | Finance for non Finance Managers | 07.11.2005 ರಿಂದ 12.11.2005 | |
| 06 | ಶ್ರೀ ಎನ್. ಶಾಂತಪ್ಪ, ಉಪ ಕಾರ್ಯದರ್ಶಿಗಳು, ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ | Finance for non Finance Managers | 07.11.2005 ರಿಂದ 12.11.2005 | |
| 07 | ಶ್ರೀ ಉಮೇಶ್ ಕುಸುಗಲ್, ಉಪ ಕಾರ್ಯದರ್ಶಿಗಳು, ಜಿಲ್ಲಾ ಪಂಚಾಯತ್, ರಾಯಚೂರು. | Finance for non Finance Managers | 07.11.2005 ರಿಂದ 12.11.2005 | |
| 08 | ಶ್ರೀಮತಿ ಜಿ. ಸತ್ಯವತಿ, ಸರ್ಕಾರದ ಉಪ ಕಾರ್ಯದರ್ಶಿಗಳು, ಸಿಆಸುಇ (ಇ ಆಡಳಿತ) | Creativity Reinvention and Self Enhancement for practicing Managers | 05.12.2005 ರಿಂದ 09.12.2005 | |

ಸಂಬಂಧಪಟ್ಟ ಅಧಿಕಾರಿಗಳು ನಿಯೋಜಿಸಲ್ಪಟ್ಟಿರುವ ತರಬೇತಿಗೆ ತಪ್ಪದೇ ಹಾಜರಾಗತಕ್ಕದ್ದು. ನಿಯಮಾನುಸಾರ ಈ ಅಧಿಕಾರಿಗಳು ತರಬೇತಿ ಅವಧಿಯಲ್ಲಿನ ಪ್ರಯಾಣಕ್ಕೆ ಭತ್ಯೆ/ದಿನ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 690

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಎ.ಬಿ. ಇಬ್ರಾಹಿಂ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ - ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಕ್ರಮಾಂಕ: ಸಿಆಸುಇ 63 ಎಸ್‌ಇಎನ್ 98, ದಿನಾಂಕ: 26.7.2004.

2. ಶ್ರೀ ಎ.ಬಿ. ಇಬ್ರಾಹಿಂ, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ: 24.8.2004.

**ಪ್ರಸ್ತಾವನೆ:**

ಮಂಗಳೂರು ಮಹಾನಗರ ಪಾಲಿಕೆ ಆಯುಕ್ತರಾಗಿ 1996-99ರ ಅವಧಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಸರ್ಕಾರದ ಅನುಮತಿ ಪಡೆಯದೇ ತಮ್ಮ ಅಧಿಕಾರ ವ್ಯಾಪ್ತಿಯನ್ನು ಮೀರಿ ನಿಯಮ ಬಾಹಿರವಾಗಿ ಡಂಪರ್ ಪ್ಲೇಸರ್ ಕಂಟೈನರ್, ಟೆಂಪೋ ಟ್ರಾವೆಲರ್‌ಗಳನ್ನು ಲಕ್ಷಾಂತರ ರೂ.ಗಳಲ್ಲಿ ಖರೀದಿಸಿದ ಹಾಗೂ ಹಳೆಯ ಕಾರನ್ನು ವಿಲೇವಾರಿ ಮಾಡಿದ ಆರೋಪಕ್ಕಾಗಿ ಶ್ರೀ ಎ.ಬಿ. ಇಬ್ರಾಹಿಂ, ಕೆಎಎಸ್ ಅಧಿಕಾರಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 26.7.2004 ರಂದು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 12 ರನ್ವಯ ನೋಟೀಸ್ ಜಾರಿ ಮಾಡುವುದರ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸಿಗೆ ಆಪಾದಿತ ಅಧಿಕಾರಿಯು ಮೇಲೆ (2) ರಲ್ಲಿ ಓದಲಾದ ದಿನಾಂಕ: 24.8.2004ರ ಉತ್ತರ ಸಲ್ಲಿಸಿ ಕೌನ್ಸಿಲ್ ನಿರ್ಣಯ ಆಡಳಿತಾಧಿಕಾರಿಗಳ ಠರಾವಿನ ಮೇರೆಗೆ ಸರ್ಕಾರದ ಅನುಮತಿಯನ್ನು ಕಾದಿಟ್ಟು ಸಾರ್ವಜನಿಕ ಸ್ವಾಸ್ಥ್ಯವನ್ನು ಗಮನದಲ್ಲಿಟ್ಟುಕೊಂಡು ಡಂಪರ್ ಪ್ಲೇಸರ್, ಕಂಟೈನರ್‌ಗಳನ್ನು ಖರೀದಿಸಲಾಯಿತು. ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯು ಸೂರತ್ಕಲ್‌ವರೆವಿಗೂ ವಿಸ್ತಾರಗೊಂಡ ಕಾರಣ ಸ್ಥಾಯಿ ಸಮಿತಿ ಸದಸ್ಯರು ವಿವಿಧ ಸ್ಥಳಗಳ ಪರಿಶೀಲನೆಗಾಗಿ ಪ್ರಯಾಣಿಸಬೇಕಿದ್ದರಿಂದ ಹಾಗೂ ಆಯುಕ್ತರು ಮತ್ತು ಮೇಯರ್ ಅವರ ಉಪಯೋಗಕ್ಕಾಗಿ ಅಗತ್ಯವಿದ್ದ ಕಾರಣ ಟೆಂಪೋ ಟ್ರಾವೆಲರ್ ಹಾಗೂ ಹೊಸ ಅಂಬಾಸಿಡರ್ ಕಾರನ್ನು ಖರೀದಿಸಲಾಯಿತು. ಈ ವಾಹನಗಳನ್ನು ಅಂದಿನ ಜಿಲ್ಲಾಧಿಕಾರಿ ಹಾಗೂ ಆಡಳಿತಾಧಿಕಾರಿಗಳ ಮಂಜೂರಾತಿ ಪಡೆದು ಖರೀದಿಸಲಾಗಿದೆ. ಈ ಖರೀದಿಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಮಹಾನಗರ ಪಾಲಿಕೆಯ ಪೌರ ಕಾರ್ಮಿಕರ

ಕೊರತೆಯಿಂದ ಸ್ವಚ್ಛತೆ ಕಾಪಾಡುವ ದೃಷ್ಟಿಯಿಂದ ಖರೀದಿಸಲಾಗಿದೆಯೆಂದು ತಿಳಿಸಿ ಇದರಲ್ಲಿ ಅಕ್ರಮ ಇಲ್ಲದಿರುವ ಮೇರೆಗೆ ತಮ್ಮ ಮೇಲಿನ ಆರೋಪಗಳನ್ನು ಕೈ ಬಿಡುವಂತೆ ಕೋರಿದ್ದಾರೆ. ಅವರು ನೀಡಿರುವ ಉತ್ತರವನ್ನು ಪರಿಶೀಲಿಸಿ ಅದನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 63 ಎಸ್‌ಇಎನ್ 98, ಬೆಂಗಳೂರು, ದಿನಾಂಕ: 6ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಎ.ಬಿ. ಇಬ್ರಾಹಿಂ, ಕೆಎಎಸ್ ಅಧಿಕಾರಿ ಇವರಿಗೆ ಎಚ್ಚರಿಕೆ ನೀಡುತ್ತಾ ಅವರ ವಿರುದ್ಧ ದಿನಾಂಕ: 26.7.2004ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 691 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಜಲಸಂಪನ್ಮೂಲ ಸಚಿವಾಲಯ

**ಸುತ್ತೋಲೆ ಸಂಖ್ಯೆ: ಜಸಂಇ 21 ಕೆಬಿಎನ್ 2005, ಬೆಂಗಳೂರು, ದಿನಾಂಕ: 7ನೇ ಮೇ 2005**

**ವಿಷಯ:** ಸ್ವಾಭಾವಿಕ ಮೂಲಗಳು / ನೀರಾವರಿ ಯೋಜನೆಗಳಿಂದ ಹಾಗೂ ನದಿ ನೀರನ್ನು ಬಳಸಲು ಜಲ ಸಂಪನ್ಮೂಲ ಇಲಾಖೆಯಿಂದ ಮಾತ್ರ ಅನುಮತಿ ನೀಡುವುದರ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಸುತ್ತೋಲೆ ಸಂಖ್ಯೆ: ನೀಇ 55 ಎಂಬಿಐ 2000, ದಿನಾಂಕ: 3.3.2001.

2. ಸರ್ಕಾರದ ಸುತ್ತೋಲೆ ಸಂಖ್ಯೆ: ಜಸಂಇ 55 ಎಂಬಿಐ 2000, ದಿನಾಂಕ: 4.7.2002.

**ಪ್ರಸ್ತಾವನೆ:**

ಮೇಲ್ಕಂಡ ಸುತ್ತೋಲೆಗಳಲ್ಲಿ ಯಾವುದೇ ನೀರಾವರಿ ಯೋಜನೆಗಳಿಂದ / ಸ್ವಾಭಾವಿಕ ಮೂಲಗಳಿಂದ ನೀರನ್ನು ಬಳಸಲು ಬೃಹತ್ ನೀರಾವರಿ ಇಲಾಖೆಯಿಂದ (ಜಲ ಸಂಪನ್ಮೂಲ ಇಲಾಖೆ) ಮಾತ್ರ ಅನುಮತಿ ಪಡೆಯಲು ಹಾಗೂ ಆಯಾ ಮೂಲಗಳಿಂದ ನೀರನ್ನು ಬಳಸಲು ಅನುಮತಿ ನೀಡಬಹುದಾದ ಅಧಿಕಾರಿಗಳ ವಿವರಗಳನ್ನು ಸಹ ಸೂಚಿಸಲಾಗಿತ್ತು.

ಅದರಂತೆ, ಜಲಾಶಯಗಳು ಮೂಲವಾದಲ್ಲಿ ನೀರೆತ್ತಲು ಅರ್ಜಿಗಳನ್ನು ಸರ್ಕಾರದ ಮಟ್ಟದಲ್ಲಿ ಮಾತ್ರ ಪರಿಗಣಿಸಲಾಗುವುದೆಂದು ಮೇಲಿನ ಉಲ್ಲೇಖ (2)ರ ಸುತ್ತೋಲೆಯಲ್ಲಿ ಸೂಚಿಸಲಾಗಿತ್ತು.

ಜಲಾಶಯದ ಮೂಲದಿಂದ ನೀರೆತ್ತಲು ಅರ್ಜಿಗಳನ್ನು ಮುಖ್ಯ ಅಭಿಯಂತರರುಗಳು ಕಳುಹಿಸಿಕೊಟ್ಟಿದ್ದನ್ನು ನಿಗಮಗಳು ಸರ್ಕಾರಕ್ಕೆ ಶಿಫಾರಸ್ಸಿನೊಂದಿಗೆ ಕಳುಹಿಸಿಕೊಡಬೇಕಾಗಿರುತ್ತದೆ. ಅರ್ಜಿಗಳು ವಿವಿಧ ಕಛೇರಿಗಳಿಂದ ಸರ್ಕಾರಕ್ಕೆ ಬಂದು ಸರ್ಕಾರದಿಂದ ಪುನಃ ಹಿಂದಿರುಗುವಲ್ಲಿ ಸಾಕಷ್ಟು ಕಾಲಾವಕಾಶ ಬೇಕಾಗಿದ್ದು, ಸಣ್ಣಪುಟ್ಟ ರೈತರು ನೀರಾವರಿಗಾಗಿ ಪಂಪ್ ಸೆಟ್‌ಗಳ ಮೂಲಕ ಅನುಮತಿ ಪಡೆಯಲು ಮುಂದಿನ ಕ್ರಮಗಳನ್ನು ಜರುಗಿಸುವಲ್ಲಿ ವಿಳಂಬವಾಗುವುದನ್ನು ಗಮನಿಸಿ, ಜಲಾಶಯದ ಮೂಲದಿಂದ ನೀರನ್ನು ಎತ್ತಲು ಅರ್ಜಿಯನ್ನು ಪರಿಗಣಿಸುವುದನ್ನು ಸರ್ಕಾರದ ಮಟ್ಟದ ಬದಲಾಗಿ ಸಂಬಂಧಿಸಿದ ಸ್ಥಳೀಯ ಅಧಿಕಾರಿಗಳಿಗೆ ಪರಿಗಣಿಸುವ ಅಧಿಕಾರ ನೀಡಿದಲ್ಲಿ ಪರವಾನಗಿಯನ್ನು ಪಡೆಯುವ ಕಾರ್ಯವಿಧಾನ ಸರಳವಾಗುವುದು ಎಂದು ಕೆಲವು ಶಾಸಕರು ತಿಳಿಸಿರುತ್ತಾರೆ.

ಈ ವಿಚಾರವನ್ನು ಹಾಗೂ ಇದರೊಂದಿಗೆ ಜಲಾಶಯದಲ್ಲಿ ಕುಡಿಯುವ ನೀರಿನ ಅವಶ್ಯಕತೆಯ ಬೇಡಿಕೆಯನ್ನು ಗಮನದಲ್ಲಿಟ್ಟುಕೊಂಡು ಪರವಾನಗಿ ನೀಡುವುದನ್ನು ನ್ಯಾಯಯುತವಾಗಿ ಪರಿಗಣಿಸಬೇಕಾಗಿದ್ದು, ಈ ಅಧಿಕಾರವನ್ನು ಜಲಾಶಯವು ಒಳಪಡುವ ಮುಖ್ಯ ಇಂಜಿನಿಯರ್ ರವರಿಗೆ ನೀಡುವುದು ಉಚಿತವೆಂದು ತೀರ್ಮಾನಿಸಿ ದಿನಾಂಕ: 4.7.2002ರ ಸುತ್ತೋಲೆ ಸಂಖ್ಯೆ: ಜಸಂಇ 55 ಎಂಬಿಐ 2000 ರಲ್ಲಿರುವುದನ್ನು ಈ ಕೆಳಗಿನಂತೆ ಮಾರ್ಪಡಿಸಲಾಗಿದೆ.

| | | |
|---|---|---|
| 1. | ನೀರಾವರಿ ಯೋಜನೆಗಳಿಂದ<br>ಅ) ಜಲಾಶಯಗಳು | ಜಲಾಶಯದಿಂದ ನೀರೆತ್ತಲು ಅರ್ಜಿಗಳನ್ನು ಸಂಬಂಧಿಸಿದ ಮುಖ್ಯ ಇಂಜಿನಿಯರ್ ಮಟ್ಟದಲ್ಲಿ ಮಾತ್ರ ಪರಿಗಣಿಸಲಾಗುವುದು. ಮುಖ್ಯ ಇಂಜಿನಿಯರ್‌ರವರು ಪ್ರತಿ ತಿಂಗಳ ಕೊನೆಯಲ್ಲಿ ಪರಿಗಣಿಸಲಾದ ಅರ್ಜಿಗಳ ವಿವರಗಳ ತಃಖ್ತೆಯನ್ನು ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆಯ ಪ್ರಧಾನ ಇಂಜಿನಿಯರ್ ರವರಿಗೆ ತಪ್ಪದೆ ಸಲ್ಲಿಸುವುದು. |
| | ಆ) ಮತ್ತು ಕ್ರಮ ಸಂಖ್ಯೆ (2) ರಿಂದ (5) ವರೆಗೆ | ಯಾವುದೇ ಬದಲಾವಣೆ ಇರುವುದಿಲ್ಲ. |

**ಹೆಚ್.ಎಸ್. ಮಹೇಶ್**

ಪಿ.ಆರ್. 692 ಸರ್ಕಾರದ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಕೃತ ಜ್ಞಾಪನ**

**ಸಂಖ್ಯೆ: ಆಕುಕ 401 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 6ನೇ ಮೇ 2005**

**ವಿಷಯ:** 2005-06ನೇ ಸಾಲಿಗೆ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಸೇವಾನಿರತ ವೈದ್ಯರನ್ನು ಆಯ್ಕೆ ಮಾಡುವ ಬಗ್ಗೆ.

ಕರ್ನಾಟಕ ವೈದ್ಯಕೀಯ ಕಾಲೇಜುಗಳು ಮತ್ತು ದಂತ ಕಾಲೇಜುಗಳು (ಸ್ನಾತಕೋತ್ತರ ಕೋರ್ಸುಗಳಿಗೆ ಆಯ್ಕೆ) ನಿಯಮಗಳು 1987ರ ಪ್ರಕಾರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಮತ್ತು ಸ್ವಾಯತ್ತ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸೇವಾ ನಿರತ ದಂತ ಆರೋಗ್ಯಾಧಿಕಾರಿಗಳು 2005-06ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿ ಸಲ್ಲಿಸಿ, ಕುಲಸಚಿವರು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೆಂಗಳೂರು, ಇವರ ಆಯ್ಕೆ ಪಟ್ಟಿಯಂತೆ ಹಾಗೂ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಆದೇಶದ ಅನುಬಂಧದಲ್ಲಿರುವ ಅವರ ಹೆಸರಿನ ಮುಂದೆ ನಮೂದಿಸಿರುವ ಕೋರ್ಸು ಮತ್ತು ಕಾಲೇಜುಗಳಿಗೆ ಆಯ್ಕೆ ಮಾಡಲಾಗಿದೆ.

2. ಕರ್ನಾಟಕ ಸರ್ಕಾರಿ ಸೇವಾ ನಿಯಮ 7ರ ಅನುಬಂಧ-1 ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸೇವಾನಿರತ ದಂತ ಆರೋಗ್ಯಾಧಿಕಾರಿಗಳ ಪ್ರತಿನಿಯೋಜನಾ ಸೌಲಭ್ಯವಿರುತ್ತದೆ. ಪ್ರಥಮ ಬಾರಿಗೆ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾ ನಿರತ ದಂತ ಆರೋಗ್ಯಾಧಿಕಾರಿಗಳು ಅವರುಗಳು ಆಯ್ಕೆ ಮಾಡಿರುವ ಕೋರ್ಸು ಮತ್ತು ಕಾಲೇಜಿನಲ್ಲಿ ಆಯ್ಕೆಯಾಗಿರುವ ವೈದ್ಯಾಧಿಕಾರಿಗಳು ಅಫಿಡವಿಟ್ ಫಾರಂ-ಎ ಯನ್ನು ಭರ್ತಿ ಮಾಡಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ : ಜಿಲ್ಲಾ ಶಸ್ತ್ರ ಚಿಕಿತ್ಸಕರು : ಸಂಬಂಧಪಟ್ಟ ಮೇಲಾಧಿಕಾರಿಗಳಿಗೆ ಸಲ್ಲಿಸತಕ್ಕದ್ದು.

3. ಅಲ್ಲದೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು : ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಸಂಬಂಧಿಸಿದ ಮೇಲಾಧಿಕಾರಿಗಳು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ನಮೂನೆ-19 ಅಥವಾ 19ಎ ರನ್ವಯ ಬಾಂಡ್ ಅನ್ನು ಪಡೆಯುವುದು.

4. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಅಥವಾ ಸಂಬಂಧಿಸಿದ ಮೇಲಾಧಿಕಾರಿಗಳು ಅಫಿಡವಿಟ್ ಮತ್ತು ಬಾಂಡ್‌ಗಳನ್ನು ಪಡೆದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರಿಗೆ ಕಳುಹಿಸತಕ್ಕದ್ದು. ಯಾವುದೇ ಕಾರಣಕ್ಕೂ ಮೇಲಿನ ದಾಖಲಾತಿಗಳನ್ನು ಪಡೆಯದೇ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಅಭ್ಯರ್ಥಿಗಳನ್ನು ಪ್ರಸ್ತುತ ಕರ್ತವ್ಯದಿಂದ ಬಿಡುಗಡೆ ಮಾಡಿದಲ್ಲಿ ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ : ಮೇಲಾಧಿಕಾರಿಗಳು ಸರ್ಕಾರ ತೆಗೆದುಕೊಳ್ಳುವ ಕ್ರಮಕ್ಕೆ ನೇರ ಹೊಣೆಗಾರರಾಗುತ್ತಾರೆ.

5. ಈ ಅಧಿಕೃತ ಜ್ಞಾಪನದ ಅನುಬಂಧದಲ್ಲಿ ತಿಳಿಸಿರುವ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾಗಿರುವ ಸೇವಾನಿರತ ದಂತ ಆರೋಗ್ಯಾಧಿಕಾರಿಗಳ ಸ್ನಾತಕೋತ್ತರ ಕೋರ್ಸಿಗೆ ಪ್ರವೇಶ ಪಡೆದ ನಂತರ ಸರ್ಕಾರ ಪರಿಶೀಲಿಸಿ ಪ್ರತ್ಯೇಕವಾಗಿ ವ್ಯಾಸಂಗದ ರಜೆ ಅಥವಾ ಪ್ರತಿನಿಯೋಜನಾ ರಿಯಾಯಿತಿ ಸೌಲಭ್ಯ ಮಂಜೂರು ಮಾಡಲು ಕ್ರಮ ತೆಗೆದುಕೊಳ್ಳುವುದು. ಸ್ನಾತಕೋತ್ತರ ಕೋರ್ಸಿನ ಪ್ರವೇಶ ಪಡೆದ ದಿನಾಂಕದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ಇಲ್ಲದೇ ಈ ಅಭ್ಯರ್ಥಿಗಳು ವೇತನ : ರಜೆಯ ವೇತನ ಪಡೆಯಲು ಅವಕಾಶವಿರುವುದಿಲ್ಲ.

6. ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿರುವ ಸೇವಾನಿರತ ದಂತ ಆರೋಗ್ಯಾಧಿಕಾರಿಗಳ ವೇತನ ಹಾಗೂ ನಿಯೋಜನೆ ಭತ್ಯೆ ಬಟವಾಡೆ ಮಾಡುವ ಅಧಿಕಾರವನ್ನು ಅವರನ್ನು ನಿಯೋಜಿಸಿರುವ ಕಾಲೇಜಿಗೆ ಸಂಬಂಧಿಸಿದ ಜಿಲ್ಲೆ ಸರ್ಕಾರಿ ಕಾಲೇಜಿನ ಪ್ರಾಂಶುಪಾಲರು : ಪ್ರಾಂಶುಪಾಲರು, ಆಕುಕ ತರಬೇತಿ ಕೇಂದ್ರ, ಜಿಲ್ಲಾ ಶಸ್ತ್ರ ಚಿಕಿತ್ಸಕರು : ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇವರುಗಳಿಗೆ ನೀಡಲಾಗಿದೆ.

7. ಈ ಅಧಿಕೃತ ಜ್ಞಾಪನದ ಅನುಬಂಧದಲ್ಲಿ ತಿಳಿಸಿರುವ 2005-06ನೇ ಸಾಲಿನಲ್ಲಿ ಸ್ನಾತಕೋತ್ತರ ವ್ಯಾಸಂಗಕ್ಕೆ ಆಯ್ಕೆಯಾದ ಸೇವಾ ನಿರತ ವೈದ್ಯರು ಸಂಬಂಧಪಟ್ಟ ದಂತ ವೈದ್ಯಕೀಯ ಕಾಲೇಜುಗಳಲ್ಲಿ ಸ್ನಾತಕೋತ್ತರ ಕೋರ್ಸು ಪ್ರಾರಂಭವಾಗುವವರೆಗೆ ಯಾವ ಸ್ಥಳದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆಯೋ ಆ ಜಾಗದಲ್ಲಿ ಮುಂದುವರಿಯುವುದು ಹಾಗೂ ತದನಂತರ ಕರ್ತವ್ಯದಿಂದ ಬಿಡುಗಡೆಗೊಳ್ಳತಕ್ಕದ್ದು. ಸಂಬಂಧಿಸಿದ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಹಾಗೂ ಸಂಬಂಧಿಸಿದ ಮೇಲಾಧಿಕಾರಿಗಳು ಅದರಂತೆ ಕ್ರಮ ತೆಗೆದುಕೊಳ್ಳಬೇಕೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಶಂಕರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಅಧಿಕೃತ ಜ್ಞಾಪನ ಸಂಖ್ಯೆ: ಆಕುಕ 401 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 06.05.2005ಕ್ಕೆ**

**ಅನುಬಂಧ**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆಯ ಸೇವಾನಿರತ ದಂತ ಆರೋಗ್ಯಾಧಿಕಾರಿಗಳನ್ನು 2005-06ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿರುವ ವೈದ್ಯರುಗಳ ವಿವರ.

ದಂತ ಆರೋಗ್ಯಾಧಿಕಾರಿಗಳು ಆಯ್ಕೆಯಾಗಿರುವ

| ಕ್ರ. ಸಂ. | ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ | ಸೇವಾನಿರತ ದಂತ ಆರೋಗ್ಯಾಧಿಕಾರಿ ಹೆಸರು ಮತ್ತು ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಮತ್ತು ವಿಳಾಸ | ವಿಷಯ | ವೈದ್ಯಕೀಯ ವಿದ್ಯಾಲಯ | ಆಯ್ಕೆ ಮಾಡಿರುವ ವರ್ಗ |
|---|---|---|---|---|---|
| 1 | 2 | 3 | 4 | 5 | 6 |
| 01 | 11 | ಡಾ: ಲೋಕೇಶ್ ಪಿ., ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ತಿಪಟೂರು, ತುಮಕೂರು ಜಿಲ್ಲೆ. | ಎಂಡಿಎಸ್ (ಕನ್ಸರ್‌ವೇಟಿವ್ ಡೆಂಟಿಸ್ಟ್ರಿ) | ಸರ್ಕಾರಿ ದಂತ ಕಾಲೇಜು, ಬೆಂಗಳೂರು | ಪಜಾ |
| 02 | 3 | ಡಾ: ಶೋಭಾ ನಟರಾಜ್, ದಂತ ಆರೋಗ್ಯಾಧಿಕಾರಿ, ಸರ್ಕಾರಿ ದಂತ ವೈದ್ಯಕೀಯ ಕಾಲೇಜು, ಬೆಂಗಳೂರು. | ಎಂಡಿಎಸ್ (ಓರಲ್ ಸರ್ಜರಿ) | ಸರ್ಕಾರಿ ದಂತ ಕಾಲೇಜು, ಬೆಂಗಳೂರು | ಸಾವ |
| 03 | 6 | ಡಾ: ಸುಧಾ ಎಸ್.ಆರ್., ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಶ್ರೀನಿವಾಸಪುರ, ಕೋಲಾರ ಜಿಲ್ಲೆ. | ಎಂಡಿಎಸ್ (ಓರಲ್ ಸರ್ಜರಿ) | ಆಕ್ಸ್‌ಫರ್ಡ್ ದಂತ ಕಾಲೇಜು, ಬೆಂಗಳೂರು | ಸಾವ |
| 04 | 1 | ಡಾ: ಗುಣಶೀಲ ಬಿ., ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಮಳವಳ್ಳಿ, ಮಂಡ್ಯ ಜಿಲ್ಲೆ. | ಎಂಡಿಎಸ್ (ಆರ್ಥೋ ಡಾಂಷಿಯಾ) | ಎಂಎಸ್ ರಾಮಯ್ಯ ದಂತ ಕಾಲೇಜು, ಬೆಂಗಳೂರು. | ಸಾವ |

| 1 | 2 | 3 | 4 | 5 | 6 |
|---|---|---|---|---|---|
| 05 | 2 | ಡಾ: ವಿಜಯಲಕ್ಷ್ಮೀ ಎಂ.ಎನ್., ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಬಾಗೇಪಲ್ಲಿ, ಕೋಲಾರ ಜಿಲ್ಲೆ. | ಎಂಡಿಎಸ್ (ಆರ್ಥೋ ಡಾಂಷಿಯಾ) | ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಧಾರವಾಡ. | ಸಾವ |
| 06 | 5 | ಡಾ: ಅನಾಲಿನಿ, ದಂತ ಆರೋಗ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಮುಲ್ಕಿ, ದಕ್ಷಿಣ ಕನ್ನಡ ಜಿಲ್ಲೆ. | ಎಂಡಿಎಸ್ (ಆರ್ಥೋ ಡಾಂಷಿಯಾ) | ಎ.ಬಿ. ಶೆಟ್ಟಿ, ಮಂಗಳೂರು | ಸಾವ |
| 07 | 7 | ಡಾ: ಮಂಜುನಾಥ್ ಡಿ.ಎ., ದಂತ ಆರೋಗ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಮುಳಬಾಗಿಲು, ಕೋಲಾರ ಜಿಲ್ಲೆ. | ಎಂಡಿಎಸ್ (ಆರ್ಥೋ ಡಾಂಷಿಯಾ) | ಬಾಪೂಜಿ ದಂತ ಕಾಲೇಜು, ದಾವಣಗೆರೆ. | ಸಾವ |
| 08 | 12 | ಡಾ: ಡಿಂಪಲ್ ಬಿ.ಎಂ., ದಂತ ಆರೋಗ್ಯಾಧಿಕಾರಿ, ಕ್ರಾಫರ್ಡ್ ಆಸ್ಪತ್ರೆ, ಸಕಲೇಶಪುರ, ಹಾಸನ ಜಿಲ್ಲೆ. | ಎಂಡಿಎಸ್ (ಆರ್ಥೋ ಡಾಂಷಿಯಾ) | ಕೆಎಲ್ಇ ದಂತ ಕಾಲೇಜು, ಬೆಳಗಾಂ | ಸಾವ |
| 09 | 10 | ಡಾ: ನಾಗರತ್ನ ಜೆ., ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಆನೇಕಲ್, ಬೆಂಗಳೂರು ನಗರ ಜಿಲ್ಲೆ. | ಎಂಡಿಎಸ್ (ಪೀಡೋಡಾಂಷಿಯಾ) | ಆಕ್ಸ್‌ಫರ್ಡ್ ದಂತ ಕಾಲೇಜು, ಬೆಂಗಳೂರು | ಸಾವ |
| 10 | 9 | ಡಾ: ಅನಸೂಯ ವೀರಪ್ಪ ಕಿವದಾಸಣ್ಣನವರ್., ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಬೈಲಹೊಂಗಲ, ಬೆಳಗಾಂ ಜಿಲ್ಲೆ. | ಎಂಡಿಎಸ್ (ಪೀಡೋಡಾಂಷಿಯಾ) | ಕೆಎಲ್ಇ ದಂತ ಕಾಲೇಜು, ಬೆಳಗಾಂ. | ಸಾವ |
| 11 | 18 | ಡಾ: ಅನುಪಮ ಎನ್., ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಜಗಳೂರು, ದಾವಣಗೆರೆ ಜಿಲ್ಲೆ. | ಎಂಡಿಎಸ್ (ಪ್ರಾಸ್ಥೋಡೊಂಟಿಕ್ಸ್) | ಒಕ್ಕಲಿಗರ ಸಂಘ ದಂತ ಕಾಲೇಜು ಬೆಂಗಳೂರು | ಸಾವ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಶಂಕರ್**

ಪಿ.ಆರ್. 694 ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** 2005-06ನೇ ಸಾಲಿನ ನೀರಾವರಿ ಯೋಜನಾ ವಲಯ ಗುಲ್ಬರ್ಗಾ ರಡಿಯಲ್ಲಿ ಇರುವ ನೀರಾವರಿ ಯೋಜನಾ ನಿರ್ಮಾಣ ವೃತ್ತ ಕಛೇರಿ, ಗುಲ್ಬರ್ಗಾ ಮತ್ತು ಗುಣ ನಿಯಂತ್ರಣ ವಿಭಾಗ, ಗುಲ್ಬರ್ಗಾದ ಸಿಬ್ಬಂದಿಗೆ ವೇತನಕ್ಕಾಗಿ ಅನುದಾನ ಒದಗಿಸುವ ಕುರಿತು.

**ಓದಲಾಗಿದೆ:**
1. ಮುಖ್ಯ ಇಂಜಿನಿಯರ್, ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾರವರ ಪತ್ರ ಸಂಖ್ಯೆ: ನೀಯೋವಗು/ ಆಯವ್ಯಯ/ಬಜೆಟ್/05-06/82, ದಿನಾಂಕ: 6.4.2005.
2. ಸರ್ಕಾರದ ಆದೇಶ ಸಂಖ್ಯೆ: ಜಸಂಇ 29 ಎಂಟಿಜೆಡ್ 2004, ದಿನಾಂಕ: 18.4.2005.
3. ಸರ್ಕಾರದ ಆದೇಶ ಸಂಖ್ಯೆ: ಜಸಂಇ 93 ಎಂಟಿಜೆಡ್ 2004, ದಿನಾಂಕ: 11.4.2005.

**ಪ್ರಸ್ತಾವನೆ:**

ಮುಖ್ಯ ಇಂಜಿನಿಯರ್, ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾರವರು ಓದಲಾಗಿದೆ (1) ರಲ್ಲಿ 2005-06ನೇ ಸಾಲಿನ ಆಯವ್ಯಯದ ಅಂದಾಜುಗಳ ಅಪೆಂಡಿಕ್ಸ್-ಬಿ ಯನ್ನು ಸಲ್ಲಿಸಲಾಗಿದ್ದು, ಆದರಂತೆ ನೀರಾವರಿ ಯೋಜನಾ ವಲಯದ ಎಲ್ಲಾ ಯೋಜನೆಗಳಿಗೆ ಅನುದಾನ ಒದಗಿಸಲಾಗಿದ್ದು, ಆದರೆ ಮುಖ್ಯ ಲೆಕ್ಕ ಶೀರ್ಷಿಕೆ 4701-01-359-1-01ರ ಅಡಿಯಲ್ಲಿ ಅಧೀಕ್ಷಕ ಅಭಿಯಂತರರು, ಜಸಂಇ, ನೀರಾವರಿ ಯೋಜನೆಗಳ ನಿರ್ಮಾಣ ವೃತ್ತ, ಗುಲ್ಬರ್ಗಾ ಹಾಗೂ ಗುಣನಿಯಂತ್ರಣ ವಿಭಾಗ ಗುಲ್ಬರ್ಗಾಕ್ಕೆ ಸಿಬ್ಬಂದಿ ವೇತನ ಭತ್ಯೆಗಳಿಗಾಗಿ ಯಾವುದೇ ಅನುದಾನ ಒದಗಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಎರಡು ಕಛೇರಿಗಳ ಸಿಬ್ಬಂದಿಗಳ ಮಾರ್ಚ್ 2005ನೇ ತಿಂಗಳ ವೇತನ ಪಾವತಿ ಮಾಡಲಾಗಿರುವುದಿಲ್ಲ. ಈ ಕಛೇರಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಿಬ್ಬಂದಿಗೆ ತ್ವರಿತವಾಗಿ ಸದರಿ ಮುಖ್ಯ ಲೆಕ್ಕ ಶೀರ್ಷಿಕೆಯಡಿ ಅನುದಾನ ಒದಗಿಸಬೇಕೆಂದು ಹಾಗೂ ಕೂಡಲೇ ಮಾರ್ಚ್ ತಿಂಗಳ ವೇತನ ನೀಡುವಂತೆ ಖಜಾನೆ ನಿರ್ದೇಶಕರಿಗೆ ನಿರ್ದೇಶನ ನೀಡಬೇಕೆಂದು ಮುಖ್ಯ ಅಭಿಯಂತರರು, ನೀರಾವರಿ ಯೋಜನಾ ವಲಯ, ಗುಲ್ಬರ್ಗಾರವರು ಕೋರಿರುತ್ತಾರೆ.

ಓದಲಾಗಿದೆ (3)ರ ಸರ್ಕಾರಿ ಆದೇಶದಲ್ಲಿ ನೀರಾವರಿ ಯೋಜನಾ ವಲಯ ಕಛೇರಿ ಹಾಗೂ ಐ.ಪಿ.ಸಿ. ವೃತ್ತ ಹಾಗೂ ಇದರಡಿಯಲ್ಲಿ ಬರುವ ವಿಭಾಗಗಳ ಹಾಗೂ ಉಪವಿಭಾಗಗಳ ಕಛೇರಿಗಳನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸಲಾಗಿದೆ.

ಓದಲಾಗಿದೆ (2)ರ ಸರ್ಕಾರಿ ಆದೇಶದಲ್ಲಿ ಅಮರ್ಜಾ ಯೋಜನೆಯು ಕರ್ನಾಟಕ ನೀರಾವರಿ ನಿಗಮಕ್ಕೆ ಹಸ್ತಾಂತರಗೊಂಡ ಕಾರಣ, ಸದರಿ ಯೋಜನೆಯಿಂದ ಉಳಿತಾಯವಾಗುವ ಅನುದಾನದಲ್ಲಿ ಅಧೀಕ್ಷಕ ಅಭಿಯಂತರರು, ಐ.ಪಿ.ಸಿ. ವೃತ್ತ, ಗುಲ್ಬರ್ಗಾ ಮತ್ತು ಗುಣ ನಿಯಂತ್ರಣ ವಿಭಾಗ, ಗುಲ್ಬರ್ಗಾ ಹಾಗೂ ಅದರಡಿಯಲ್ಲಿ ಬರುವ ಉಪ ವಿಭಾಗಗಳ ಸಿಬ್ಬಂದಿ ವೇತನಕ್ಕಾಗಿ ಅವಶ್ಯ ಅನುದಾನವನ್ನು ಮರು ಹೊಂದಾಣಿಕೆ ಮಾಡಿಕೊಳ್ಳುವ ಕುರಿತು ಸರ್ಕಾರದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 37 ಎಂಟಿಜೆಡ್ 2005, ಬೆಂಗಳೂರು, ದಿನಾಂಕ: 10ನೇ ಮೇ 2005**

ಪ್ರಸ್ತಾವನೆಗೆ ಸಂಬಂಧಿಸಿದಂತೆ, ಅಮರ್ಜಾ ಮಧ್ಯಮ ನೀರಾವರಿ ಯೋಜನೆಯು ಕರ್ನಾಟಕ ನೀರಾವರಿ ನಿಗಮಕ್ಕೆ ಹಸ್ತಾಂತರಗೊಂಡಿದ್ದು, ಅಮರ್ಜಾ ಯೋಜನೆಗೆ 2005-06ನೇ ಸಾಲಿನ ಅನುದಾನದಲ್ಲಿ ಲೆಕ್ಕ ಶೀರ್ಷಿಕೆ 4701-03-341-1-01 ರಡಿಯಲ್ಲಿ ರೂ.147.29 ಲಕ್ಷಗಳು ಉಳಿತಾಯವಾಗುತ್ತಿದ್ದು, ಅಧೀಕ್ಷಕ ಅಭಿಯಂತರರು, ಐಪಿಸಿ ವೃತ್ತ, ಗುಲ್ಬರ್ಗಾ ಕಛೇರಿಯ ಸಿಬ್ಬಂದಿಯ ಮಾರ್ಚ್ ಮತ್ತು ಏಪ್ರಿಲ್ 2005ರ ತಿಂಗಳುಗಳ ವೇತನ, ತುಟ್ಟಿ ಭತ್ಯೆ ಮತ್ತು ಇತರೆ ಭತ್ಯೆಗಳು ಹಾಗೂ ಗುಣ ನಿಯಂತ್ರಣ ವಿಭಾಗ, ಗುಲ್ಬರ್ಗಾದ ಸಿಬ್ಬಂದಿಯ 2005-06ನೇ ಪೂರ್ಣ ಸಾಲಿನ ವೇತನ, ತುಟ್ಟಿ ಭತ್ಯೆ ಹಾಗೂ ಇತರೆ ಭತ್ಯೆಗಳಿಗೆ ತಗಲುವ ವೆಚ್ಚವನ್ನು ಅಮರ್ಜಾ ಯೋಜನೆಯ ಲೆಕ್ಕ ಶೀರ್ಷಿಕೆ 4701-03-341-1-01 ರಡಿಯಲ್ಲಿ ಭರಿಸುವಂತೆ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 230 ಆಕೋ-3 2005, ದಿನಾಂಕ: 10.05.2005 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಡಿ. ಧಮನ್**

ಪಿ.ಆರ್. 695

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),

ಜಲ ಸಂಪನ್ಮೂಲ ಇಲಾಖೆ (ಕೃಭಾಜನಿನಿ ವಿ.ಕೋಶ).

## ಶಿಕ್ಷಣ ಸಚಿವಾಲಯ

**ವಿಷಯ:** ಅನುದಾನಿತ ನಿವೃತ್ತ ನರ್ಸರಿ ಶಾಲಾ ಸಿಬ್ಬಂದಿಗೆ ನೀಡುತ್ತಿರುವ ಸಂಚಿತ ವೇತನವನ್ನು ಬ್ಯಾಂಕ್ ಮೂಲಕ ವಿತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಇಡಿ 1 ಪಿಜಿಸಿ 86, ದಿನಾಂಕ: 26.07.94.
2) ಸರ್ಕಾರದ ಆದೇಶ ಸಂಖ್ಯೆ: ಇಡಿ 151 ಪಿಎಂಎಸ್ 95, ದಿನಾಂಕ: 09.08.99.
3) ನಿದೇಶಕರು (ಪ್ರಾಥಮಿಕ ಶಿಕ್ಷಣ), ಇವರ ಪತ್ರ ಸಂಖ್ಯೆ: ಸಿ7(8).1243 ಪ್ರಾ.ಪಿಂ.ಸಂ.ಹ. 36/2002-03, ದಿನಾಂಕ: 09.08.2004.
4) ಗೌರವ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸರ್ಕಾರಿ ಅನುದಾನಿತ ನರ್ಸರಿ ಶಾಲಾ ಸಿಬ್ಬಂದಿ ಸಂಘ (ರಿ), ಬೆಂಗಳೂರು, ಇವರ ಮನವಿ ದಿನಾಂಕ: 27.01.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 26.07.1994ರ ಸರ್ಕಾರದ ಆದೇಶದಲ್ಲಿ ದಿನಾಂಕ: 01.04.1984ರ ಪೂರ್ವದಲ್ಲಿ ವೇತನಾನುದಾನಕ್ಕೆ ಒಳಪಟ್ಟಿರುವ ಅನುದಾನಿತ ಪೂರ್ವ ಪ್ರಾಥಮಿಕ ಶಾಲೆಗಳಿಗೆ ಅನುದಾನ ಸಹಿತ ಅನುಮೋದನೆಗೊಂಡಿರುವ ಸಿಬ್ಬಂದಿಗೆ ಸದರಿ ಆದೇಶದಲ್ಲಿ ವಿಧಿಸಿರುವ ಷರತ್ತಿಗೊಳಪಟ್ಟು ಮಾಸಿಕ ರೂ.380/- ಸಂಚಿತ ಮೊಬಲಗನ್ನು ಭವಿಷ್ಯಾನ್ವಯವಾಗಿ ಅನ್ವಯಿಸುವಂತೆ ನೀಡಲು ಆದೇಶಿಸಿದೆ.

2. ಮುಂದುವರೆದು, ಮೇಲೆ (2) ರಲ್ಲಿ ಓದಲಾದ ದಿನಾಂಕ: 09.08.1999ರ ಸರ್ಕಾರದ ಆದೇಶದಲ್ಲಿ ದಿನಾಂಕ: 01.04.1984ರ ಪೂರ್ವದಲ್ಲಿ ವೇತನಾನುದಾನಕ್ಕೆ ಒಳಪಟ್ಟಿರುವ ಅನುದಾನಿತ ಪೂರ್ವ ಪ್ರಾಥಮಿಕ ಶಾಲೆಗಳಲ್ಲಿ ಅನುದಾನ ಸಹಿತ ಅನುಮೋದನೆಗೊಂಡ ಸಿಬ್ಬಂದಿಗೆ ಈಗಾಗಲೇ ನೀಡುತ್ತಿರುವ ಸಂಚಿತ ಮೊಬಲಗು ರೂ.380/- (ಮುನ್ನೂರ ಎಂಬತ್ತು ಮಾತ್ರ) ಗಳನ್ನು ರೂ.500/- (ಐದು ನೂರು ರೂಪಾಯಿಗಳು ಮಾತ್ರ)ಕ್ಕೆ ಹೆಚ್ಚಿಸಲು ಹಾಗೂ ಭವಿಷ್ಯಾನ್ವಯವಾಗಿ ಜಾರಿಗೆ ಬರುವಂತೆ ಆದೇಶಿಸಿದೆ.

3. ಖಜಾನೆ ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು, ಇವರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 02 ಎಫ್‌ಆರ್ 03, ದಿನಾಂಕ: 22.01.2004ರ ಸೂಚನೆಗಳನ್ವಯ ಅನುದಾನಿತ ಪೂರ್ವ ಪ್ರಾಥಮಿಕ ಶಾಲಾ ನಿವೃತ್ತ ಸಿಬ್ಬಂದಿಯವರಿಗೆ ಸಂಚಿತ ಹಣ ರೂ.500/- ನ್ನು ಬ್ಯಾಂಕ್ ಮೂಲಕ ವಿತರಿಸಬಹುದಾದ ಕುರಿತಂತೆ ನಿವೃತ್ತ ಸಿಬ್ಬಂದಿಗಳಿಗೆ ಬ್ಯಾಂಕ್ ಖಾತೆಗಳ ಮೂಲಕ ಪಾವತಿ ಮಾಡಲು ಬಯಸಿದಲ್ಲಿ ಶಿಕ್ಷಣಾಧಿಕಾರಿಗಳು ಬಿಲ್ಲಿನೊಂದಿಗೆ ಅನುಬಂಧ ನೀಡಿದಲ್ಲಿ ಅನುಬಂಧ ಕಾಣಿಸಿರುವ ಬ್ಯಾಂಕಿನ ಹೆಸರಿಗೆ ಚೆಕ್ಕನ್ನು ನೀಡಲು ಅವಕಾಶವಿರುವುದಾಗಿ ತಿಳಿಸಿರುವ ಹಿನ್ನೆಲೆಯಲ್ಲಿ ನಿರ್ದೇಶಕರು (ಪ್ರಾಥಮಿಕ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ನಿವೃತ್ತ ಶಿಕ್ಷಕರು ಪಿಂಚಣಿಯನ್ನು ಬ್ಯಾಂಕ್ ಮೂಲಕ ವಿತರಿಸುವ ಕುರಿತಂತೆ ಮೇಲೆ (3) ರಲ್ಲಿ ಓದಲಾದ ದಿನಾಂಕ: 31.12.2004ರ ಪತ್ರದಲ್ಲಿ ತಿಳಿಸುತ್ತಾ, ಇದರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆ ಉಂಟಾಗುವುದಿಲ್ಲ ಎಂದು ತಿಳಿಸಿರುತ್ತಾರೆ.

4. ಅನುದಾನಿತ ಪೂರ್ವ ಪ್ರಾಥಮಿಕ ಶಾಲಾ ಸಿಬ್ಬಂದಿಗೆ ಸರ್ಕಾರದಿಂದ ನೀಡಲಾಗುತ್ತಿರುವ ಸಂಚಿತ ಮೊಬಲಗು ರೂ.500/- ಪಡೆಯಲು, ಬಹಳ ಅನಾನುಕೂಲವಾಗಿರುತ್ತದೆಂದು ಹಾಗೂ ಈ ರೀತಿಯ ಅನಾನುಕೂಲತೆಯನ್ನು ತಪ್ಪಿಸಲು ನೀಡಲಾಗುತ್ತಿರುವ ಸಂಚಿತ ಮೊಬಲಗು ಹಣವನ್ನು ಬ್ಯಾಂಕ್ ಮೂಲಕ ನಿವೃತ್ತ ಸಿಬ್ಬಂದಿಗೆ ವಿತರಿಸಲು ಕೋರಿ ಮನವಿಗಳು ಸಹ ಸ್ವೀಕೃತವಾಗಿವೆ.

5. ಮೇಲೆ ವಿವರಿಸಿರುವ ಅಂಶಗಳನ್ವಯ ಮನವಿಯಲ್ಲಿನ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ನಿವೃತ್ತ ಪೂರ್ವ ಪ್ರಾಥಮಿಕ ಶಾಲಾ ಸಿಬ್ಬಂದಿ, ತಮ್ಮ ನಿವೃತ್ತಿ ವೇತನವನ್ನು ಪಡೆಯುವಲ್ಲಿ ಅನುಭವಿಸುತ್ತಿರುವ ತೊಂದರೆಯನ್ನು ನಿವಾರಿಸುವ ದೃಷ್ಟಿಯಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 173 ಪಿಎಂಸಿ 2004, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2005**

6. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ: 01.04.1984ರ ಪೂರ್ವದಲ್ಲಿನ ಅನುದಾನ ಸಹಿತ ಅನುಮೋದನೆಗೊಂಡ ಅನುದಾನಿತ ಪೂರ್ವ ಪ್ರಾಥಮಿಕ ಶಾಲಾ ಸಿಬ್ಬಂದಿಗೆ ನೀಡುತ್ತಿರುವ ಸಂಚಿತ ಮೊಬಲಗು ರೂ.500/- (ಐದು ನೂರು ರೂಪಾಯಿಗಳು ಮಾತ್ರ) ಗಳನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 02 ಎಫ್‌ಆರ್ 03, ದಿನಾಂಕ: 22.01.2004ರ ಸೂಚನೆಗಳನ್ವಯ ನಿವೃತ್ತ ಸಿಬ್ಬಂದಿಯು ಬ್ಯಾಂಕ್ ಮೂಲಕ ಪಡೆಯಲು ಅವಕಾಶವನ್ನು ಕಲ್ಪಿಸಿ ಈ ಮೂಲಕ ಆದೇಶಿಸಿದೆ.

7. ಸದರಿ ನಿವೃತ್ತ ಫಲಾನುಭವಿಗಳು ಬ್ಯಾಂಕ್ ಖಾತೆಗಳ ಮೂಲಕ ಪಾವತಿ ಮಾಡಲು ಬಯಸಿದಲ್ಲಿ ಬಿಲ್ಲಿನೊಂದಿಗೆ ಪೇಯೀಸ್ ಲಿಸ್ಟ್ ನೀಡಿದಲ್ಲಿ ಅದರ ಪ್ರಕಾರ ಬ್ಯಾಂಕ್ ಖಾತೆಗಳಿಗೆ ಚೆಕ್ಕುಗಳನ್ನು ನೀಡಲು ಕ್ರಮ ತೆಗೆದುಕೊಳ್ಳತಕ್ಕದ್ದು.

8. ಅನುದಾನಿತ ಪೂರ್ವ ಪ್ರಾಥಮಿಕ ನಿವೃತ್ತ ಸಿಬ್ಬಂದಿಯವರು, ಅವರು ನಿವೃತ್ತಿ ಹಣವನ್ನು ಪಡೆಯಲು ಇಚ್ಛಿಸುವ ಬ್ಯಾಂಕ್‌ನ ವ್ಯವಸ್ಥಾಪಕರ ಸಮ್ಮುಖದಲ್ಲಿ ವರ್ಷಕ್ಕೆ ಎರಡು ಬಾರಿ ಖುದ್ದಾಗಿ ಹಾಜರಾಗಿ (ಅಂದರೆ ಆಯಾ ವರ್ಷದ ಜನವರಿ ಮತ್ತು ಜುಲೈ ತಿಂಗಳಿನಲ್ಲಿ) ಸಹಿ ಮಾಡಿ ಜೀವಿತ ಪ್ರಮಾಣ ಪತ್ರ (ಲೈಫ್ ಸರ್ಟಿಫಿಕೇಟ್) ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಹೆಚ್. ಪಡಸಲಗಿ**

ಪಿ.ಆರ್. 696 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ:** ಸರ್ಕಾರಿ ಪೂರ್ವ ಪ್ರಾಥಮಿಕ ಶಾಲೆಗಳಲ್ಲಿ ಹಿಂದೆ ಸೇವೆ ಸಲ್ಲಿಸುತ್ತಿದ್ದು, ಈಗ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಆಯಾಗಳ ಮಾಸಿಕ ಗೌರವ ಧನವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಡಿ 58 ಪಿಬಿಎಸ್ 2002, ದಿನಾಂಕ: 07.01.2004.

2. ನಿರ್ದೇಶಕರು (ಪ್ರಾಥಮಿಕ ಶಿಕ್ಷಣ) ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಆ1(3) ಆಯಾ.ಮಾ.ವೇ(ಹ1)/2002-03, ದಿನಾಂಕ: 22.01.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1)ರ ಸರ್ಕಾರಿ ಆದೇಶದಲ್ಲಿ ರಾಜ್ಯ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಆಯಾಗಳ ಮಾಸಿಕ ವೇತನವನ್ನು ರೂ.600 ರಿಂದ 800ಕ್ಕೆ ಏರಿಸಲಾಗಿತ್ತು. ಮೇಲೆ ಓದಲಾಗಿರುವ (2)ರ ಪ್ರಸ್ತಾವನೆಯಲ್ಲಿ ನಿರ್ದೇಶಕರು (ಪ್ರಾಥಮಿಕ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಆಯಾಗಳ ಮಾಸಿಕ ವೇತನವನ್ನು ಹೆಚ್ಚಿಸುವ ಬಗ್ಗೆ ಪ್ರಸ್ತಾಪಿಸಿ ಸರ್ಕಾರದ ಆದೇಶ ಕೋರಿರುತ್ತಾರೆ. ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಆಯಾಗಳ ಮಾಸಿಕ ವೇತನವನ್ನು ಹೆಚ್ಚಿಸುವ ವಿಷಯವನ್ನು ಸರ್ಕಾರ ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 31 ಪಿಬಿಎಸ್ 2005, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2005**

ರಾಜ್ಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಆಯಾಗಳ ಮಾಸಿಕ ಸಂಚಿತ ವೇತನವನ್ನು ರೂ.800.00 (ರೂ. ಎಂಟುನೂರು) ರಿಂದ ರೂ.1200 (ರೂ. ಒಂದು ಸಾವಿರದ ಇನ್ನೂರು) ಕ್ಕೆ ಹೆಚ್ಚಿಸಲು ಈ ಮೂಲಕ ಮಂಜೂರಾತಿ ನೀಡಿದೆ. ಈ ಹೆಚ್ಚುವರಿ ವೆಚ್ಚವನ್ನು ಇಲಾಖೆಯು ಆಯವ್ಯಯದ ಅವಕಾಶದಿಂದಲೇ ಭರಿಸತಕ್ಕದ್ದು. ಈ ಸಂಬಂಧ ಹೆಚ್ಚುವರಿ ಅನುದಾನ ನೀಡಲಾಗುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 268:ವೆಚ್ಚ-8/2005, ದಿನಾಂಕ: 19.04.2005 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಹೆಚ್. ಪಡಸಲಗಿ**

ಪಿ.ಆರ್. 697 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಕಾನೂನು ಸಚಿವಾಲಯ

**ಸೇರ್ಪಡೆ ಸಂಖ್ಯೆ: ಲಾ 55 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 7ನೇ ಮೇ 2005**

ಸರ್ಕಾರಿ ಆದೇಶ ಸಂಖ್ಯೆ: ಲಾ 55 ಎಲ್‌ಎಸಿ 2005, ದಿನಾಂಕ: 15.3.2005ರ ಆದೇಶ ಭಾಗದ ಕಂಡಿಕೆ-2ರ ನಂತರ ಈ ಕೆಳಕಂಡಂತೆ ಸೇರ್ಪಡೆ ಮಾಡಿಕೊಂಡು ಓದಿಕೊಳ್ಳುವುದು.

"ಮೈಸೂರಿನ ಜೆಎಂಎಫ್‌ಸಿ 3ನೇ ನ್ಯಾಯಾಲಯಕ್ಕೆ ಸಂಬಂಧಿಸಿದ ವೆಚ್ಚವನ್ನು ಲೆಕ್ಕ ಶೀರ್ಷಿಕೆ '2014-00-108-0-01-ಯೋಜನೇತರ' ಇದರ ಅಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**

ಪಿ.ಆರ್. 698 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಕಾನೂನು ಇಲಾಖೆ (ಆಡಳಿತ-1).

**ವಿಷಯ:** ರಾಯಚೂರಿನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಲಾ 125 ಎಲ್‌ಎಸಿ 2002, ದಿನಾಂಕ: 25.6.2003.

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ: ಜೆಒಬಿ-2-102(5)2005, 19.4.2005.

**ಪ್ರಸ್ತಾವನೆ:**

ರಾಯಚೂರಿನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 26.5.2005ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯಕ್ಕೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಹುದ್ದೆಗಳನ್ನು ದಿನಾಂಕ: 27.05.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 120 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 9ನೇ ಮೇ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ರಾಯಚೂರಿನ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 27.5.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್. 699 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-1).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಕೆ.ಎನ್. ವಿಜಯ, ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ ಇವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳು.

**ಓದಲಾಗಿದೆ:**
1. ಟಿಪ್ಪಣಿ ಸಂಖ್ಯೆ: ಎಂಎನ್‌ಡಬ್ಲ್ಯೂ ಎನ್-5/2004, ದಿನಾಂಕ: 16.12.2004.
2. ಅಧಿಸೂಚನೆ ಸಂಖ್ಯೆ: ಸಿಆಸುಇ 378 ಸಆಸೇ 2004, ದಿನಾಂಕ: 4.2.2005.
3. ಶ್ರೀ ಕೆ.ಎನ್. ವಿಜಯ, ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ ಇವರು ನೀಡಿರುವ ಪ್ರಭಾರ ವರ್ಗಾವಣೆ ಪ್ರಮಾಣ ಪತ್ರ ದಿನಾಂಕ: 5.2.2005.
4. ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ, ಪ್ರಧಾನ ಕಛೇರಿ, ನಂ.1/1, ತಿಮ್ಮಯ್ಯ ರಸ್ತೆ, ಬೆಂಗಳೂರು, ದಿನಾಂಕ: 1.3.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 4.2.2005ರ ಅಧಿಸೂಚನೆಯನುಸಾರ ಶ್ರೀ ಕೆ.ಎನ್. ವಿಜಯ, ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ, ಪ್ರಧಾನ ಕಛೇರಿ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಸಮಾಜ ಕಲ್ಯಾಣ ಸಚಿವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 15(1) (iii)ರ ಅನ್ವಯ ಗುತ್ತಿಗೆ ಆಧಾರದ ಮೇರೆಗೆ ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿಯಾಗಿ ನೇಮಿಸಲಾಗಿರುತ್ತದೆ.

ಶ್ರೀ ಕೆ.ಎನ್. ವಿಜಯ ಅವರು ದಿನಾಂಕ: 5.2.2005ರ ಪೂರ್ವಾಹ್ನ ಈ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಆದುದರಿಂದ ಸದರಿ ಅಧಿಕಾರಿಗಳ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ಹೊರಡಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 378 ಸಆಸೇ 2004, ಬೆಂಗಳೂರು, ದಿನಾಂಕ: 9ನೇ ಮೇ 2005**

ಶ್ರೀ ಕೆ.ಎನ್. ವಿಜಯ, ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ, ಬೆಂಗಳೂರು ಇವರು ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ ಹುದ್ದೆಯಲ್ಲಿ ಗುತ್ತಿಗೆ ಆಧಾರದ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳನ್ನು ಈ ಆದೇಶದ ಅನುಬಂಧದಲ್ಲಿ ವಿವರಿಸಲಾಗಿದೆ.

ಈ ನಿಬಂಧನೆ ಹಾಗೂ ಷರತ್ತುಗಳನ್ನು ಒಪ್ಪಿಕೊಳ್ಳುವ ಬಗ್ಗೆ ರೂ.50.00ರ ಛಾಪಾ ಕಾಗದದಲ್ಲಿ ಈ ನಿಬಂಧನೆ ಹಾಗೂ ಷರತ್ತುಗಳನ್ನು ನಮೂದಿಸಿ ಸಹಿ ಮಾಡಿ ಈ ಆದೇಶದ ಏಳು ದಿನಗಳ ಒಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 630/ವೆಚ್ಚ-5/2005, ದಿನಾಂಕ: 7.4.2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ANNEXURE**

Sri K.N. Vijaya is appointed on contract basis on the following terms and conditions:-

1. **PERIOD:** The period of contract of Sri K.N. Vijaya, Manager K.S.F.C. is for the period to be co-terminus with the office of the Minister for Social Welfare or so long as the service of Sri K.N. Vijaya are required in the said office, whichever is earlier.
2. **COMMENCEMENT AND END OF CONTRACT:** The contract shall commence on the date on which the official takes charge of the post under the Government and ends on the date on which he hands over charge of the post under the Government.
3. **PAY & OTHER ALLOWANCES:** During the period of contract, Sri K.N. Vijaya shall be entitled to pay including DA/HRA/CCA admissible to him in his parent organisation. However he shall not be entitled to any other deputation or Foreign service allowance. He will also not be eligible for special allowances like lunch allowance/over time allowance/Bonus/Ex-gratia etc., attached to the post or attached to the parent organisation.
4. **LEAVE RULES:** He will be governed by the Leave Rules applicable to him in his parent organisation.
5. **LEAVE SALARY CONTRIBUTION:** The Government shall pay Leave Salary contribution at the rate of 11% of pay.
6. **PENSION CONTRIBUTION:** Pension contribution shall be paid by the Government at the provisional rate of $^{1}/_{8}$th of pay.
7. **GRATUITY FUND CONTRIBUTION:** Government shall pay contribution towards service gratuity at the rate of half months salary for every completed one year of service in contract.
8. **MEDICAL CONCESSION:** The Official shall be entitled to the medical attendance as per the Karnataka Government Servants (Medical Attendance) Rules 1963.

**9.** He shall perform the functions of Personnel Secretary to Minister for Social Welfare and attend to all work entrusted to him from time to time by the said Minister.

**10.** He shall perform his duties diligently and he shall maintain strict secrecy in respect of official information which he comes to know in the course of his duties.

**11.** He shall be liable to reimburse to Government all the losses which the Government may sustain due to misconduct of any sort on his Part.

**U.P. PRABHU**

P.R. 700

Under Secretary to Government,
Department of Personnel and Administrative Reforms (Services-2).

**ವಿಷಯ:** ಶ್ರೀ ಎಸ್. ಮಹದೇವಯ್ಯ, ಕೆ.ಎ.ಎಸ್ (ಹಿ.ಶ್ರೇ) ಅಧಿಕಾರಿ ಇವರ 2003-2004ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿನ ಪ್ರತಿಕೂಲ ಷರಾ ಸ್ಥಿರೀಕರಿಸುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಕಾರ್ಯದರ್ಶಿಯವರ ಅ.ಸ.ಪತ್ರ ಸಂಖ್ಯೆ: ಮುಕಾ 78 ವಾಕಾನಿವ 04, ದಿನಾಂಕ: 19.07.2004.-
2. ಶ್ರೀ ಎಸ್. ಮಹದೇವಯ್ಯ, ಕೆ.ಎ.ಎಸ್. (ಹಿ.ಶ್ರೇ.) ಅಧಿಕಾರಿ ಉಪ ಕಾರ್ಯದರ್ಶಿ, ಕೊಡಗು ಜಿಲ್ಲೆ, ಪಂಚಾಯತ್, ಮಡಿಕೇರಿ ಇವರ ಮನವಿ ಪತ್ರ ಸಂಖ್ಯೆ: ಕೊ.ಜಿ.ಪಂ:ಉಕಾ:ಆಶಾ:10:2004-05, ದಿನಾಂಕ: 04.09.2004.
3. ಅ.ಸ.ಪತ್ರ ಸಂಖ್ಯೆ: ಸಿಆಸುಇ:347:ಅಸೇಇ:2004, ದಿನಾಂಕ: 16.10.2004.
4. ಟಿಪ್ಪಣಿ ಸಂಖ್ಯೆ: ಗ್ರಾಅಪ 65 ಪರವ 2004, ದಿನಾಂಕ: 17.02.2005 ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಂದ

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಅರೆ ಸರ್ಕಾರಿ ಪತ್ರದಲ್ಲಿ ಶ್ರೀ ಎಸ್. ಮಹದೇವಯ್ಯ, ಕೆ.ಎ.ಎಸ್. (ಹಿ.ಶ್ರೇ.) ಅಧಿಕಾರಿ, ಈ ಹಿಂದಿನ ಉಪ ಕಾರ್ಯದರ್ಶಿ, ಕೊಡಗು ಜಿಲ್ಲಾ ಪಂಚಾಯತ್, ಮಡಿಕೇರಿ ಮತ್ತು ಹಾಲಿ ಬೋಧಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು, ಇವರ 2003-04ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಿಸಿರುವ ಈ ಕೆಳಕಂಡ ಪ್ರತಿಕೂಲ ಷರಾವನ್ನು ಅಧಿಕಾರಿಗೆ ತಿಳಿಸಲಾಗಿದೆ.

"ಇವರು ಕೆಲಸದಲ್ಲಿ ಶ್ರದ್ಧೆ ವಹಿಸುತ್ತಿಲ್ಲ ಮತ್ತು ಚುನಾಯಿತ ಪ್ರತಿನಿಧಿಗಳ ಜೊತೆ ಸರಿಯಾದ ಸಂಬಂಧ ಹೊಂದಿಲ್ಲವೆಂದು ಮೌಖಿಕ ದೂರುಗಳು ಬಂದಿವೆ. ಈ ಬಗ್ಗೆ CEO ಮುಖಾಂತರ ಇವರನ್ನು ಸರಿಪಡಿಸಲು ಪ್ರಯತ್ನಿಸಲಾಯಿತು. ಆದರೂ ಸರಿಹೋಗಲಿಲ್ಲ."

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿಯ ಮನವಿ ಪತ್ರದಲ್ಲಿ ಅಧಿಕಾರಿಯು ವಿವರಣೆ ನೀಡಿ ತಮ್ಮ 2003-04ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಿಸಿರುವ ಪ್ರತಿಕೂಲ ಷರಾವನ್ನು ಕೈಬಿಡಬೇಕೆಂದು ಕೋರಿದ್ದಾರೆ.

ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಪ್ರತಿಕೂಲ ಷರಾವನ್ನು ದಾಖಲಿಸಿರುವ ಪುನರಾವಲೋಕನ ಪ್ರಾಧಿಕಾರಿಯಾದ ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರನ್ನು ಪ್ರತಿಕೂಲ ಷರಾ ತೆಗೆದು ಹಾಕುವ ಬಗ್ಗೆ ಅಭಿಪ್ರಾಯ ಕೋರಲಾಗಿದೆ. ಮೇಲೆ ಕ್ರಮ ಸಂಖ್ಯೆ (4)ರ ಟಿಪ್ಪಣಿಯಲ್ಲಿ ಪುನರಾವಲೋಕನ ಪ್ರಾಧಿಕಾರಿಯವರು ತಮ್ಮ ಅಭಿಪ್ರಾಯ ನೀಡಿರುತ್ತಾರೆ.

ಅರ್ಜಿದಾರರ ಮನವಿಯಲ್ಲಿನ ಅಂಶಗಳನ್ನು ಹಾಗೂ ಸಕ್ಷಮ ಪ್ರಾಧಿಕಾರದ ಅಭಿಪ್ರಾಯ ಹಾಗೂ ಪ್ರಕರಣದ ವಿವರಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 347 ಅಸೇಇ 2004, ಬೆಂಗಳೂರು, ದಿನಾಂಕ: 16ನೇ ಮೇ 2005**

ಶ್ರೀ ಎಸ್. ಮಹದೇವಯ್ಯ, ಕೆ.ಎ.ಎಸ್. (ಹಿ.ಶ್ರೇ) ಅಧಿಕಾರಿ, ಈ ಹಿಂದಿನ ಉಪ ಕಾರ್ಯದರ್ಶಿ, ಕೊಡಗು ಜಿಲ್ಲಾ ಪಂಚಾಯತ್, ಮಡಿಕೇರಿ ಹಾಗೂ ಹಾಲಿ ಬೋಧಕರು, ಆಡಳಿತ ತರಬೇತಿ ಸಂಸ್ಥೆ ಮೈಸೂರು ಇವರ 2003-2004ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ಈ ಕೆಳಕಂಡಂತೆ ದಾಖಲಾಗಿರುವ ಪ್ರತಿಕೂಲ ಷರಾವನ್ನು ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಾವಳಿಗಳು 2000ರ ನಿಯಮ 10(2)ರ ಪ್ರಕಾರ ಸ್ಥಿರೀಕರಿಸಲಾಗಿದೆ.

"ಇವರು ಕೆಲಸದಲ್ಲಿ ಶ್ರದ್ಧೆ ವಹಿಸುತ್ತಿಲ್ಲ ಮತ್ತು ಚುನಾಯಿತ ಪ್ರತಿನಿಧಿಗಳ ಜೊತೆ ಸರಿಯಾದ ಸಂಬಂಧ ಹೊಂದಿಲ್ಲವೆಂದು ಮೌಖಿಕ ದೂರುಗಳು ಬಂದಿವೆ. ಈ ಬಗ್ಗೆ CEO ಮುಖಾಂತರ ಇವರನ್ನು ಸರಿಪಡಿಸಲು ಪ್ರಯತ್ನಿಸಲಾಯಿತು. ಆದರೂ ಸರಿಹೋಗಲಿಲ್ಲ."

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 701

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ತಿದ್ದುಪಡಿ ಸಂಖ್ಯೆ: ಸಿಆಸುಇ 67 ಸೇಇಮು 2004(ಭಾ), ಬೆಂಗಳೂರು, ದಿನಾಂಕ: 6ನೇ ಮೇ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 67 ಸೇಇಮು 2004, ದಿನಾಂಕ: 05.10.2004ರ 6 ಮತ್ತು 7ನೇ ಸಾಲಿನಲ್ಲಿ "ಕ.ನಾ.ಸೇ.ನಿಯಮ 118-ಎ (1) ರಡಿ ಹಾಗೂ ಉಪನಿಯಮ (2)"ರ ಬದಲಾಗಿ "ಕ.ನಾ.ಸೇ.ನಿಯಮ 118-ಎ (1) ಮತ್ತು ಉಪನಿಯಮ (4)ರ ಪ್ರಕಾರ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 702

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ, ಹೊಳೆ ಆಲೂರು ಈ ಸಂಘಕ್ಕೆ ನೇಮಕ ಮಾಡಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಣೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 54 ಮುನೋಸೊ 99, ದಿನಾಂಕ: 10.10.2001.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 58 ಮುನೋಸೊ 2003, ದಿನಾಂಕ: 18.12.2004.
3. ಉಪ ವಿಭಾಗಾಧಿಕಾರಿ, ಗದಗ್ : ಆಡಳಿತಾಧಿಕಾರಿ, ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ, ಹೊಳೆ ಆಲೂರು ಇವರ ಅ.ಸ.ಪತ್ರ ಸಂಖ್ಯೆ: ಕೆ.ವಿ.ಪಿ.ಎಸ್.:ವಹಿ/1/2003-04, ದಿನಾಂಕ: 3/16.10.2004.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ, ಸಮಿತಿ, ಹೊಳೆ ಆಲೂರು, ಗದಗ್ ಜಿಲ್ಲೆ, ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಘಕ್ಕೆ ಚುನಾವಣೆಯನ್ನು ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿ, ಉಪ ವಿಭಾಗಾಧಿಕಾರಿಗಳು, ಗದಗ್ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸದರಿ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಸರಿದಾರಿಗೆ ತರುವ ಬಗ್ಗೆ ನಿರೀಕ್ಷಿತ ಬೆಳವಣಿಗೆ ಉಂಟಾಗದಿದ್ದ ಕಾರಣ ಆಡಳಿತಾಧಿಕಾರಿ ಅವಧಿಯನ್ನು ಕಾಲ ಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗುತ್ತಿದೆ. ಅಂತೆಯೇ ಮೇಲೆ ಓದಲಾದ (2)ರ ಆದೇಶದ ದಿನಾಂಕದಲ್ಲಿ ಆಡಳಿತಾಧಿಕಾರಿಯವರ ಅವಧಿಯನ್ನು 6 ತಿಂಗಳ ಅವಧಿಗೆ ವಿಸ್ತರಿಸಿದ್ದು, ದಿನಾಂಕ: 10.04.2005ಕ್ಕೆ ಅವಧಿಯು ಮುಗಿದು ಹೋಗಿರುತ್ತದೆ. ಆದ್ದರಿಂದ ಪ್ರಸ್ತುತ ಆಡಳಿತಾಧಿಕಾರಿ ಅವಧಿಯನ್ನು 11.04.2005 ರಿಂದ 3 ತಿಂಗಳವರೆಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 58 ಮುನೋಸೋ 2003, ಬೆಂಗಳೂರು, ದಿನಾಂಕ: 5ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ-27ಎ ಪ್ರಕಾರ ಶ್ರೀ ಕಲ್ಮೇಶ್ವರ ವಿದ್ಯಾ ಪ್ರಸಾರಕ ಸಮಿತಿ, ಹೊಳೆ ಆಲೂರು, ಈ ಸಂಘಕ್ಕೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ: 11.04.2005 ರಿಂದ 3 ತಿಂಗಳ ಅವಧಿಗೆ ಅಥವಾ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಯವರು ಈ 3 ತಿಂಗಳ ಅವಧಿಯೊಳಗೆ ಕಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಲು ಕ್ರಮ ತೆಗೆದುಕೊಂಡು ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ತಪ್ಪದೆ ಹಸ್ತಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 712

**ವಿಷಯ:** ಶ್ರೀಮತಿ ಎಸ್.ಎ. ಸುಧಾ, ಸಹಾಯಕ ಪ್ರಾಧ್ಯಾಪಕರು, ಜೈನಾಗಮ ವಿಭಾಗ, ಸರ್ಕಾರಿ ಮಹಾರಾಜ ಸಂಸ್ಕೃತ ಕಾಲೇಜು, ಮೈಸೂರು ಇವರಿಗೆ ಸ್ವಯಂ ಚಾಲಿತ ವೇತನ ಶ್ರೇಣಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 49 ಮುಸೇವಿ 1997, ದಿನಾಂಕ: 06.06.1997.
2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಸಿಬ್ಬಂದಿ/2/ಸಿಆರ್/80/2002-03, ದಿನಾಂಕ: 15.10.2003 ಮತ್ತು 14.01.2004.

**ಪ್ರಸ್ತಾವನೆ:**

ಶ್ರೀಮತಿ ಎಸ್.ಎ. ಸುಧಾ, ಜೈನಾಗಮ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಸಂಸ್ಕೃತ ಕಾಲೇಜು, ಮೈಸೂರು ರವರು ದಿನಾಂಕ: 30.08.1986 ರಂದು ಜೈನಾಗಮ ಸಹಾಯಕ ಪ್ರಾಧ್ಯಾಪಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸದರಿಯವರು ದಿನಾಂಕ: 31.08.1996ಕ್ಕೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ್ದು, "Karnataka Civil Services (Time Bound Advancement) Rules, 1983" ರನ್ವಯ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ಸದರಿಯವರಿಗೆ 10 ವರ್ಷಗಳ ಆಯ್ಕೆ ಕಾಲಿಕ ವೇತನ ಶ್ರೇಣಿ ಮಂಜೂರು ಮಾಡಲಾಗಿರುತ್ತದೆ.

ಶ್ರೀಮತಿ ಎಸ್.ಎ. ಸುಧಾ ರವರು ದಿನಾಂಕ: 30.08.2001ಕ್ಕೆ 15 ವರ್ಷಗಳ ಸೇವೆಯನ್ನು ಜೈನಾಗಮ ಸಹಾಯಕ ಪ್ರಾಧ್ಯಾಪಕರ ಹುದ್ದೆಯಲ್ಲಿ ಪೂರೈಸಿರುತ್ತಾರೆ. ಸದರಿಯವರು ದಿನಾಂಕ: 31.08.2001 ರಲ್ಲಿ ರೂ.6300-11840ರ ವೇತನ ಶ್ರೇಣಿ ಪಡೆಯುತ್ತಿದ್ದಾರೆಂದು, ಸದರಿಯವರ ಸೇವೆ ತೃಪ್ತಿಕರವಾಗಿದ್ದು, ಸದರಿಯವರಿಗೆ "Karnataka Civil Services (Automatic Grant of Special promotion to senior scale of pay) Rules 1991"ರ ನಿಯಮ 2(4) ರನ್ವಯ ಸಹಾಯಕ ಪ್ರಾಧ್ಯಾಪಕರ ಹುದ್ದೆಯ ನಂತರದ ಪದೋನ್ನತಿ ಹುದ್ದೆಯ ವೇತನ ಶ್ರೇಣಿ ರೂ.7400-13120ನ್ನು ಹಿರಿಯ ವೇತನ ಶ್ರೇಣಿಗೆ ಸ್ವಯಂ ಚಾಲಿತ ವಿಶೇಷ ಬಡ್ತಿ ಮಂಜೂರು ಮಾಡುವಂತೆ ಕೋರಿ ಧಾರ್ಮಿಕ ದತ್ತಿ ಆಯುಕ್ತರು ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ಧಾರ್ಮಿಕ ದತ್ತಿ ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 281 ಮುಸೇವಿ 2003, ಬೆಂಗಳೂರು, ದಿನಾಂಕ: 13ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ ಜೈನಾಗಮ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಎಸ್.ಎ. ಸುಧಾ, ಸಹಾಯಕ ಪ್ರಾಧ್ಯಾಪಕರು ಇವರು ದಿನಾಂಕ: 30.08.2001ಕ್ಕೆ 15 ವರ್ಷಗಳ ಅವಧಿಯ ಸೇವೆಯನ್ನು ಒಂದೇ ಹುದ್ದೆಯಲ್ಲಿ ಪೂರೈಸಿರುವುದರಿಂದ ಸದರಿಯವರಿಗೆ "Karnataka Civil Services (Automatic Grant of Special promotion to senior scale of pay) Rules 1991"ರ ನಿಯಮ 2(4) ರನ್ವಯ ದಿನಾಂಕ: 31.08.2001 ರಿಂದ ಅನ್ವಯವಾಗುವಂತೆ ವೇತನ ಶ್ರೇಣಿ ರೂ.7400-13120ನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಮೇಶ್ ಕೆ. ಜಾಗೀರ್‌ದಾರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್. 704

## ENERGY SECRETARIAT

**Subject:** Enhancement of Wind Power Capacity from 5 M.W. to 5.25 M.W. in favour of M/s. Chiranjeevi Wind Energy Limited - Orders relating to:

**Read:**
1. Government order No: DE 26 NCE 1999, dated: 13.5.1999.
2. Government Letter No: DE 18 NCE 2002, dated: 02.2.2002.
3. Letter No. KRED/08/CWEL/2005/386, dated: 25.2.2005 received from MD, KREDL, Bangalore.

**PREAMBLE:**

In the Government Order read at (1) above, sanction has been accorded to implement 5 M.W. capacity Wind Power Project at Chikkannanahalli Arisinagundi Wind Zone, Chitradurga District by M/s. Chiranjeevi Wind Energy Limited.

In the Government Letter read at (2) above, permission has been accorded for change of site for setting of 5 MW capacity Wind Power Project from Chikkannanahalli Arisinagundi wind zone in Chitradurga District to Gonur village, Madakaripura Wind zone in Chitradurga District in favour of M/s. Chiranjeevi Wind Energy Limited.

In the letter read (3) above the Managing Director, Karnataka Renewable Energy Development Limited, Bangalore has recommended for enhancement of the Wind Power capacity from 5 M.W. to 5.25 M.W. at Gonur village, Madakaripura Wind zone in Chitradurga District in favour of M/s. Chiranjeevi Wind Energy Limited.

After examining the proposal the following order:

**GOVERNMENT ORDER No. EN 87 NCE 2005, Bangalore, Dated: 4th April 2005**

In the circumstances, explained in the preamble, Government are pleased to permit for the enhancement of Wind Power capacity from 5 M.W. to 5.25 M.W. in favour of M/s. Chiranjeevi Wind Energy Limited at Gonur village, Madakaripura Wind zone in Chitradurga District.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka,
**SURESH B. KRISHNAPPANAVAR**
Under Secretary to Government, Energy Department.

P.R. 705

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಸಿಐ 202 ಎಸ್‌ಜಿಎಫ್ 2004(ಭಾಗ), ಬೆಂಗಳೂರು, ದಿನಾಂಕ: 18ನೇ ಮೇ 2005**

ಮೈಸೂರು ಸಕ್ಕರೆ ಕಾರ್ಖಾನೆ ನಿಯಮಿತ ಮಂಡ್ಯ ಕಾರ್ಖಾನೆಯ ಪುನರುಜ್ಜೀವನಕ್ಕಾಗಿ ಸರ್ಕಾರದಿಂದ ಆರ್ಥಿಕ ನೆರವು 552.27 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾದ ಸರ್ಕಾರದ ಆದೇಶ ಸಂಖ್ಯೆ: ಸಿಐ 202 ಎಸ್‌ಜಿಎಫ್ 2004, ದಿನಾಂಕ: 06.05.2005ರ ಆದೇಶದ ಭಾಗದಲ್ಲಿ ಹೇಳಲಾಗಿರುವ "ಹಣ ಸೆಳೆಯುವ ಅಧಿಕಾರಿಯು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು" ಎಂಬುದನ್ನು "ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದ್‌ಕುಮಾರ್**
ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 707

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಚನ್ನಪಟ್ಟಣ ತಾಲ್ಲೂಕಿನಲ್ಲಿ ಬರುವ ಸಣ್ಣ ನೀರಾವರಿ ಇಲಾಖೆಗೆ ಸೇರಿದ ಅಬ್ಬೂರು ಪಿಕಪ್ ಮತ್ತು ವಾಲೇತೋಪು ಅಣೆಕಟ್ಟನ್ನು ಕಾವೇರಿ ನೀರಾವರಿ ನಿಗಮಕ್ಕೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**
1. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ ರವರ ಪತ್ರ ಸಂಖ್ಯೆ: ಸಿಎನ್‌ಎನ್/ಎಂಡಿ/ಟಿಇಬಿ/ಎಂಐ/2004/26, ದಿನಾಂಕ: 06.04.2004.
2. ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರ ಸಂಖ್ಯೆ: ಮುಇಸನೀ/ನೀಶಾ/ಚ.ಪಟ್ಟಣ/ವಾಲೇತೋಪು/2005/698, ದಿನಾಂಕ: 07.04.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು ರವರ ಪತ್ರದಲ್ಲಿ ಸಣ್ಣ ನೀರಾವರಿ ಕಾಮಗಾರಿಗಳಾದ ಚನ್ನಪಟ್ಟಣ ತಾಲ್ಲೂಕಿನ ವಾಲೇತೋಪು ಮತ್ತು ಅಬ್ಬೂರು ಪಿಕಪ್‌ಗಳನ್ನು ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ ಅಭಿವೃದ್ಧಿಯ ಸಲುವಾಗಿ ವರ್ಗಾಯಿಸಿಕೊಳ್ಳಲು ಕಾವೇರಿ ನೀರಾವರಿ ನಿಗಮ ನಿಯಮಿತದ ನಿರ್ದೇಶಕರುಗಳ ದಿನಾಂಕ: 19.01.2004 ರಂದು ನಡೆದ 3ನೇ ಮಂಡಳಿ ಸಭೆಯಲ್ಲಿ ನಿರ್ಧರಿಸಿರುವುದಾಗಿ, ಆದುದರಿಂದ ಈ ಕಾಮಗಾರಿಗಳನ್ನು ಅಂದಾಜು ಮತ್ತು ಇತರೆ ಸಂಬಂಧಿಸಿದ ವಿವರಗಳೊಂದಿಗೆ ಮುಂದಿನ ಕ್ರಮಕ್ಕಾಗಿ ನಿಗಮಕ್ಕೆ ಹಸ್ತಾಂತರಿಸುವಂತೆ ಕೋರಿರುತ್ತಾರೆ.

ಈ ಕಾಮಗಾರಿಗಳನ್ನು ಹಸ್ತಾಂತರಿಸುವ ವಿಷಯದಲ್ಲಿ ಮೇಲೆ (2) ರಲ್ಲಿ ಓದಲಾದ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಪ್ರಸ್ತಾವನೆ ಪಡೆಯಲಾಗಿದ್ದು, ಅದರಂತೆ ಸಣ್ಣ ನೀರಾವರಿ ಇಲಾಖೆಯಲ್ಲಿ ಸದರಿ ಕಾಮಗಾರಿಗಳ ಅಭಿವೃದ್ಧಿಪಡಿಸಲು ಸಾಕಷ್ಟು ಅನುದಾನದ ಕೊರತೆಯಿರುವುದರಿಂದ ಇವುಗಳನ್ನು ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸಬಹುದೆಂದು ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 62 ಅಪಿಬಂ 2004, ಬೆಂಗಳೂರು, ದಿನಾಂಕ: 20ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಣ್ಣ ನೀರಾವರಿ ಇಲಾಖೆಯಲ್ಲಿನ ಬೆಂಗಳೂರು ಗ್ರಾಮಾಂತರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನಲ್ಲಿ ಕಣ್ವ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಅಬ್ಬೂರು ಪಿಕಪ್ ಮತ್ತು ವಾಲೇತೋಪು ಅಣೆಕಟ್ಟು ಕಾಮಗಾರಿಗಳನ್ನು ಅಭಿವೃದ್ಧಿಗೊಳಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಕಾವೇರಿ ನೀರಾವರಿ ನಿಗಮಕ್ಕೆ ಹಸ್ತಾಂತರಿಸಲಾಗಿದೆ:

1. ಈಗಾಗಲೇ ನಿಯಮಾನುಸಾರ ಗುತ್ತಿಗೆ ಕರೆದು ಗುತ್ತಿಗೆದಾರರಿಗೆ ವಹಿಸಿದ್ದಲ್ಲಿ ಆ ಬಗ್ಗೆ ನಿಯಮಾವಳಿಗಳಂತೆ ಕ್ರಮ ಕೈಗೊಳ್ಳಬಹುದು ಹಾಗೂ ಗುತ್ತಿಗೆದಾರರೊಂದಿಗೆ ಯಾವುದೇ ರೀತಿಯ ವ್ಯಾಜ್ಯ ಉಂಟಾಗದಂತೆ ಕ್ರಮ ಕೈಗೊಳ್ಳಬಹುದು.
2. ಈ ಕಾಮಗಾರಿಗೆ ಸಂಬಂಧಿಸಿದಂತೆ ಗುತ್ತಿಗೆದಾರರಿಗೆ ಹಾಗೂ ಇತರರಿಗೆ ಪಾವತಿಸಬೇಕಾದ ಯಾವುದೇ ಬಿಲ್ಲುಗಳು ಬಾಕಿಯಿದ್ದಲ್ಲಿ ಸದರಿ ಹಣವನ್ನು ನಿಗಮವು ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಮಂಜುನಾಥ**

ಪಿ.ಆರ್. 708 ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರ ಗ್ರಾಮದ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಮಾಡಿಕೊಳ್ಳಲಾದ ಭೂಸ್ವಾಧೀನದ ನ್ಯಾಯಾಲಯದ ಪ್ರಕರಣದಲ್ಲಿ ಉಚ್ಚ ನ್ಯಾಯಾಲಯದ ಆದೇಶದಂತೆ ಪರಿಹಾರ ಮೊತ್ತದ ಶೇ.50 ರಷ್ಟನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ದಿನಾಂಕ: 18.03.2005ರ ಪತ್ರದ ಸಂಖ್ಯೆ: ಮುಇಂ/ಸನೀ/ಬಿಜೆಪಿ/ಭೂಸ್ವಾ ಕಮತನೂರು/04-05.

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಗ್ರಾಮದ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣದಲ್ಲಿ 39.32 ಎಕರೆ ಹೆಚ್ಚುವರಿ ಕ್ಷೇತ್ರದ ಭೂಸ್ವಾಧೀನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ: 29.12.1994 ರಂದು ಮತ್ತು 6(1)ರ ಅಧಿಸೂಚನೆಯನ್ನು ದಿನಾಂಕ: 07.03.1996 ರಂದು ಹೊರಡಿಸಲಾಗಿದೆ. ಭೂ ಪರಿಹಾರ ಮೊತ್ತದ ಐತೀರ್ಪನ್ನು ಉಪ ವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು ಬೆಳಗಾವಿ ಉಪ ವಿಭಾಗ, ಬೆಳಗಾಂ ಇವರು ದಿನಾಂಕ: 18.05.1998 ರಂದು ನೀಡಿರುತ್ತಾರೆ. ಐತೀರ್ಪಿನಂತೆ ಪರಿಹಾರಧನ ಪಡೆದ ಭೂಮಾಲೀಕರಲ್ಲಿ ಕಮತನೂರು ಗ್ರಾಮದ ಸ.ನಂ.295ರ 2.10 ಎಕರೆ, ಸ.ನಂ.305/4ರ 0.24 ಎಕರೆ ಮತ್ತು ನಿಡಸೋಶಿ ಗ್ರಾಮದ ಸ.ನಂ.222:1+2ಎ ರಲ್ಲಿ 3.35 ಎಕರೆ ಕ್ಷೇತ್ರದ ರೈತರು ಭೂಸ್ವಾಧೀನಾಧಿಕಾರಿಗಳು ಐತೀರ್ಪಿನಲ್ಲಿ ನೀಡಿದ ಪರಿಹಾರ ಧನದಿಂದ ತೃಪ್ತರಾಗದೆ ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಹೆಚ್ಚಿನ ಪರಿಹಾರಕ್ಕಾಗಿ ಹುಕ್ಕೇರಿ ಸಿವಿಲ್ ಜಡ್ಜ್ (ಸೀನಿಯರ್ ಶ್ರೇಣಿ) ನ್ಯಾಯಾಲಯ, ಹುಕ್ಕೇರಿ ಇಲ್ಲಿ ಅರ್ಜಿ ದಾಖಲಿಸಿ ಎಲ್.ಎ.ಸಿ. 132/01, 165/01 ಮತ್ತು 166/01 ಪ್ರಕರಣಗಳಲ್ಲಿ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರ ಧನದ ಆದೇಶ ಪಡೆದಿದ್ದು, ಈ ಆದೇಶಗಳ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ಸರ್ಕಾರದ ಪರವಾಗಿ ಸಲ್ಲಿಸಲಾಗಿದ್ದ ಮೇಲ್ಮನವಿಗಳಲ್ಲಿ (ಎಂಎಫ್ಎ 7592/2004, 3249/2004 ಮತ್ತು 7603/2004) ಹುಕ್ಕೇರಿ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಪರಿಹಾರ ಮೊತ್ತದ ಶೇ.50 ರಷ್ಟನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡುವ ಷರತ್ತಿಗೊಳಪಟ್ಟು ಉಚ್ಚ ನ್ಯಾಯಾಲಯವು ಮೇಲ್ಮನವಿಯನ್ನು ವಿಚಾರಣೆಗೆ ಅಂಗೀಕರಿಸಲು ಒಪ್ಪಿ ಸಿವಿಲ್ ನ್ಯಾಯಾಲಯದ ಆದೇಶಕ್ಕೆ ತಡೆಯಾಜ್ಞೆ ನೀಡಿದೆ.

ಅದರಂತೆ ಮೇಲ್ಕಂಡ ಮೂರು ಪ್ರಕರಣಗಳಲ್ಲಿ ಲೆಕ್ಕ ಹಾಕಿದ ಒಟ್ಟು ಪರಿಹಾರ ಧನದ ಮೊತ್ತದ ಶೇ.50 ರಷ್ಟು ರೂ.16,41,208-00 ಗಳನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡಲು ಹಣ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ: 18.03.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ರವರು ಕೋರಿರುತ್ತಾರೆ.

ಮುಖ್ಯ ಇಂಜಿನಿಯರ್‌ರವರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ನ್ಯಾಯಾಲಯದಲ್ಲಿ ಠೇವಣಿ ಮಾಡಬೇಕಾದ ಹಣದ ಬಗ್ಗೆ ಲೆಕ್ಕಾಚಾರ ಮಾಡಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 69 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 18ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹುಕ್ಕೇರಿ ಸಿವಿಲ್ ನ್ಯಾಯಾಲಯದ ಆದೇಶಗಳ ಮೇಲೆ ಉಚ್ಚನ್ಯಾಯಾಲಯದಲ್ಲಿ ಸಲ್ಲಿಸಲಾದ ಮೇಲ್ಮನವಿ ಸಂಖ್ಯೆ: ಎಂಎಫ್ಎ 7592/2004, 3249/2004 ಮತ್ತು 7603/2004 ಗಳಲ್ಲಿ ಉಚ್ಚ ನ್ಯಾಯಾಲಯವು ನೀಡಿರುವ ಮಧ್ಯಂತರ ಆದೇಶದಂತೆ ಈ ಮೂರು ಪ್ರಕರಣಗಳಿಗೆ ಸೇರಿ ಲೆಕ್ಕ ಹಾಕಿದ ಪರಿಹಾರ ಧನ ಮೊತ್ತದ ಶೇ.50 ರಷ್ಟು ರೂ.15,19,173/- (ಹದಿನೈದು ಲಕ್ಷ ಹತ್ತೊಂಭತ್ತು ಸಾವಿರದ ನೂರ ಎಪ್ಪತ್ತೂರು ರೂ.ಗಳು ಮಾತ್ರ) ಗಳನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ. ಎಂಎಫ್ಎ ಪ್ರಕರಣಗಳಿಗೆ ಪಾವತಿ ಮಾಡಬೇಕಾದ ಮೊತ್ತದ ವಿವರ ಈ ಕೆಳಕಂಡಂತಿದೆ:

| ಎಲ್ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ರಿ.ಸ.ನಂ./ಕ್ಷೇತ್ರ | ಸಂದಾಯ ಮಾಡಬೇಕಾದ ಮೊತ್ತ |
|---|---|---|---|
| 132/01 | 7592/04 | 295 (2.10) | ರೂ. 4,63,186.00 |
| 165/01 | 3249/04 | 205/4(0.24) | ರೂ. 1,53,165.00 |
| 166/01 | 7603/04 | 222/1+2ಎ(3.35) | ರೂ. 9,02,822.00 |
| | | **ಒಟ್ಟು** | **ರೂ.15,19,173.00** |

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ-132 ಬಂಡವಾಳ ವೆಚ್ಚಗಳು" ಅಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ: 12.06.2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಮಂಜುನಾಥ**

ಪಿ.ಆರ್. 709 ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ಅಧಿಕೃತ ಜ್ಞಾಪನ ಸಂಖ್ಯೆ: ಪಸಂಮೀ 142 ಮೀಇಸೇ 2004, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2005**

**ವಿಷಯ:** ಮೀನುಗಾರಿಕೆ ಇಲಾಖೆಯಲ್ಲಿನ ಮೀನುಗಾರಿಕೆ ಉಪ ನಿರ್ದೇಶಕರು ವೃಂದಕ್ಕೆ ಸೇರಿದ ಅಧಿಕಾರಿಗಳ ದಿನಾಂಕ: 30.04.2004ಕ್ಕೆ ಇದ್ದಂತೆ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಕಟಿಸುವ ಬಗ್ಗೆ.

ಮೀನುಗಾರಿಕೆ ಇಲಾಖೆಯಲ್ಲಿನ ಮೀನುಗಾರಿಕೆ ಉಪ ನಿರ್ದೇಶಕರು ವೃಂದಕ್ಕೆ ಸೇರಿದ ಅಧಿಕಾರಿಗಳ ದಿನಾಂಕ: 30.04.2004 ರಂದು ಇರುವಂತೆ ಕರ್ನಾಟಕ ಸರ್ಕಾರಿ ನೌಕರರ ಜೇಷ್ಠತಾ ನಿಯಮಾವಳಿ 1957ರ ನಿಯಮ 10(1)ರ ಪ್ರಕಾರ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಈ ಅಧಿಕೃತ ಜ್ಞಾಪನಕ್ಕೆ ಲಗತ್ತಿಸಲಾದ ಅನುಬಂಧ-2 ರಲ್ಲಿ ತೋರಿಸಿರುವಂತೆ ಪ್ರಕಟಿಸಲಾಗಿದೆ. ಈ ಬಗ್ಗೆ ಭಾಧಿತರಾದವರು ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸದರಿ ತಾತ್ಕಾಲಿಕ ಜೇಷ್ಠತಾಪಟ್ಟಿ ಪ್ರಕಟಣೆಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಸೂಕ್ತ ದಾಖಲೆಗಳು ಹಾಗೂ ಮಾಹಿತಿಯೊಂದಿಗೆ ಮೀನುಗಾರಿಕೆ ನಿರ್ದೇಶಕರ ಮುಖಾಂತರ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಬೆಂಗಳೂರು, ರವರಿಗೆ ಸಲ್ಲಿಸುವಂತೆ ಈ ಮೂಲಕ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಕಮಲಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀನುಗಾರಿಕೆ).

**ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಪಸಂಮೀ 142 ಮೀಇಸೇ 2004, ಬೆಂಗಳೂರು, ದಿನಾಂಕ: 27.04.2005ರ ಅನುಬಂಧ-1**

**ದಿನಾಂಕ: 15.02.1962 ರಿಂದ 30.04.2004ರ ವರೆಗಿನ ಅವಧಿಯ ಮೀನುಗಾರಿಕೆ ಉಪ ನಿರ್ದೇಶಕರು ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ - ಬ್ಲಾಕ್ ಅನುಸಾರ ರಿಕ್ತ ಸ್ಥಾನಗಳ ಹಂಚಿಕೆ ವಿವರ**

| ಕ್ರ. ಸಂ. | ಬ್ಲಾಕ್ | ಬ್ಲಾಕ್ ಅವಧಿಯಲ್ಲಿ ಉದ್ಭಾವವಾದ ರಿಕ್ತ ಸ್ಥಾನಗಳು | ವೃಂದ ಮತ್ತು ನೇಮಕಾತಿಯ ನಿಯಮಗಳಲ್ಲಿ ನಿಗದಿ ಪಡಿಸಲಾದ ಕೋಟಾ | ಕೋಟಾ ಪ್ರಕಾರ ಲಭ್ಯವಾಗುವ ರಿಕ್ತ ಸ್ಥಾನಗಳು | | ವಾಸ್ತವವಾಗಿ ಭರ್ತಿ ಮಾಡಲಾದ ರಿಕ್ತ ಸ್ಥಾನಗಳು | | ಕೋಟಾ ಮಿತಿಯಲ್ಲಿ ಮಾಡಲಾದ ನೇಮಕಾತಿ | | ಹೆಚ್ಚುವರಿ ಕೊರತೆ | | ನಂತರದ ಬ್ಲಾಕಿನಲ್ಲಿ ಹೊಂದಿಸಬೇಕಾದ ಹೆಚ್ಚುವರಿ ನೇಮಕಾತಿ | | ನೇಮಕಾತಿಗಳ ನಂತರ ಹೆಚ್ಚುವರಿ (+) ಕೊರತೆ (-) | | ಜೇಷ್ಠತೆಗಾಗಿ ಕ್ರಮ ಸಂಖ್ಯೆ |
|---|---|---|---|---|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 |
| ವೃಂದ ಮತ್ತು ನೇಮಕಾತಿ ನಿಯಮದ ಪ್ರಕಾರ ಮೀನುಗಾರಿಕೆ ಉಪ ನಿರ್ದೇಶಕರ ಹುದ್ದೆಗಳನ್ನು ಶೇ.100 ರಷ್ಟು ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರ ವೃಂದದಿಂದ ಮುಂಬಡ್ತಿಯಿಂದ ಭರ್ತಿ ಮಾಡಬೇಕಾಗಿರುವುದರಿಂದ ಈ ಹುದ್ದೆಗಳಿಗೆ ವರ್ಗೀಕರಣ ಅನ್ವಯಿಸುವುದಿಲ್ಲ. | | | | | | | | | | | | | | | | |

**ಡಿ. ಕಮಲಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀನುಗಾರಿಕೆ).

**ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಪಸಂಮೀ 142 ಮೀಇಸೇ 2004, ಬೆಂಗಳೂರು, ದಿನಾಂಕ: 27.04.2005ರ ಅನುಬಂಧ-2**

**ದಿನಾಂಕ: 15.02.1962 ರಿಂದ 30.04.2004ಕ್ಕೆ ಇದ್ದಂತೆ ಮೀನುಗಾರಿಕೆ ಉಪ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಹೆಸರು | ನೇರ ನೇಮಕಾತಿ/ ಮುಂಬಡ್ತಿ ಇತರೆ | ಮೀಸಲಾತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ: ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | **ಶ್ರೀಯುತರುಗಳಾದ** | | | | | | | |
| 1 | ಜಿ. ಲಕ್ಷ್ಮಿನಾರಾಯಣರಾವ್ | ಮುಂಬಡ್ತಿ | | 07.04.20 | 08.03.43 | 15.02.62 | 15.02.62 | ನಿವೃತ್ತಿ ಹೊಂದಿರುತ್ತಾರೆ |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 2 | ಎಂ. ಜಯರಾಜ್ | ಮುಂಬಡ್ತಿ | | 27.07.31 | 03.07.53 | 13.02.67 | 17.03.65 | ನಿವೃತ್ತಿ ಹೊಂದಿರುತ್ತಾರೆ |
| 3 | ಡಿ.ಆರ್. ಕೃಷ್ಣಮೂರ್ತಿ | -”- | | 18.05.16 | 07.02.41 | - | - | -”- |
| 4 | ಬಸವಯ್ಯ | -”- | | 07.04.16 | 01.08.41 | - | - | -”- |
| 5 | ಎಸ್. ಶ್ರೀನಿವಾಸನ್ | -”- | | 08.04.19 | 04.07.45 | - | - | -”- |
| 6 | ಹೆಚ್. ಹೊನ್ನಪ್ಪಗೌಡ | -”- | | 06.10.22 | 26.01.46 | 17.03.65 | 17.03.65 | -”- |
| 7 | ಎ. ಶಾಂತರಾಮ ರೈ | -”- | | 12.12.18 | 01.03.46 | - | - | -”- |
| 8 | ಜಿ.ಆರ್. ಯರಮಲ್ | -”- | | 02.03.19 | 05.11.45 | - | - | -”- |
| 9 | ಸಿ.ಜಿ. ಕೃಷ್ಣಮೂರ್ತಿ | -”- | | 17.01.26 | 01.04.49 | 02.08.75 | 15.03.67 | -”- |
| 10 | ಕೆ. ವೆಂಕಟೇಶ್ | -”- | | 06.08.23 | 19.02.44 | 15.03.67 | 15.03.67 | -”- |
| 11 | ಕೆ.ಎಸ್. ಶ್ರೀಪಾದರಾವ್ | -”- | | 09.01.26 | 18.12.48 | 15.07.71 | 15.07.71 | -”- |
| 12 | ವಿ.ಸಿ. ಬಾದಾಮಿ | -”- | | 01.11.24 | 09.11.49 | 23.02.72 | 23.02.72 | -”- |
| 13 | ಸುವರ್ಣಕದಮ್ | -”- | | 03.08.26 | 01.12.54 | 26.02.72 | 26.02.72 | -”- |
| 14 | ಜಿ. ಗಾನನೀಲ | -”- | | 13.03.36 | 27.08.60 | 01.07.71 | 01.07.71 | -”- |
| 15 | ಬಿ.ಎಲ್. ಕೊಟಬಾಗಿ | -”- | | 14.03.31 | 14.07.55 | 21.06.75 | 21.06.75 | -”- |
| 16 | ವಿ. ಮುದ್ದಣ್ಣ | -”- | | 28.06.36 | 15.11.61 | 22.07.75 | 22.07.75 | -”- |
| 17 | ಆರ್.ಎಸ್. ವರ್ಣೀಕರ್ | -”- | | 01.10.35 | 14..11.59 | 30.06.75 | 30.06.75 | -”- |
| 18 | ಚಂದ್ರಶೇಖರ್ ಬಿ. | -”- | | 10.06.32 | 09.08.58 | 27.06.75 | 27.06.75 | -”- |
| 19 | ಹೆಚ್.ಎನ್. ಚಂದ್ರಶೇಖರಯ್ಯ | -”- | | 02.05.33 | 28.01.58 | 27.06.75 | 27.06.75 | -”- |
| 20 | ಹೆಚ್.ಎನ್. ಸಿದ್ದಯ್ಯ | -”- | | 15.03.24 | 06.07.49 | 30.06.75 | 30.06.75 | -”- |
| 21 | ಎಂ.ಎ. ಸಯದ | -”- | | 01.12.24 | 15.12.26 | 20.10.75 | 20.10.75 | -”- |
| 22 | ಓ.ಕೆ. ಅಜ್ಜಪ್ಪ | -”- | | 08.05.33 | 29.01.58 | 22.01.79 | 22.01.79 | -”- |
| 23 | ಎಸ್.ಎನ್. ಷಣ್ಮುಖ | -”- | | 27.11.41 | 23.10.63 | 22.01.79 | 22.01.79 | -”- |
| 24 | ಅಡವಿರಾವ್ | -”- | | 24.09.37 | 26.05.69 | 16.07.79 | 16.07.79 | -”- |
| 25 | ಡಿ.ಎಂ. ಅಬ್ದುಲ್ ಹಮೀದ್ | -”- | | 17.06.44 | 26.05.69 | 10.08.79 | 10.08.79 | -”- |
| 26 | ಕೆ. ಶ್ಯಾಮಭಟ್ | -”- | | 19.04.43 | 23.05.69 | 22.07.81 | 22.07.81 | -”- |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 27 | ಬಿ.ವಿ. ಮುಜುಂದಾರ್ | ಮುಂಬಡ್ತಿ | | 08.08.31 | 24.06.57 | 01.10.84 | 01.10.84 | ನಿವೃತ್ತಿ ಹೊಂದಿರುತ್ತಾರೆ |
| 28 | ಎಂ. ಜಯದೇವ | -"- | | 16.02.34 | 11.07.59 | 08.07.82 | 01.10.84 | -"- |
| 29 | ಎಂ.ಸಿ. ಕೃಷ್ಣಪ್ರಸಾದ್ | -"- | | 14.02.36 | 13.07.59 | 01.10.84 | 01.10.84 | -"- |
| 30 | ಕೆ.ಹೆಚ್. ಪಾಟೀಲ್ | -"- | | 03.03.33 | 16.07.59 | 31.10.84 | 31.10.84 | -"- |
| 31 | ಎಸ್. ಚಂದ್ರಶೇಖರಪ್ಪ | -"- | | 15.05.38 | 27.11.59 | 03.01.86 | 03.01.86 | -"- |
| 32 | ಟಿ. ಸುಯೇಬ್ ಅಹ್ಮದ್ ಖಾನ್ | -"- | | 14.06.36 | 16.10.63 | 19.10.87 | 19.10.87 | -"- |
| 33 | ಹೆಚ್.ಎಸ್. ವೀರಪ್ಪಗೌಡ | -"- | | 26.09.58 | 13.02.85 | 25.11.93 | 13.02.91 | ಬಡ್ತಿ ಹೊಂದಿರುತ್ತಾರೆ. |
| 34 | ಕೆ. ಗಣಪತಿ ಭಟ್ | -"- | | 28.12.57 | 01.04.82 | 25.11.93 | 13.02.91 | -"- |
| 34ಎ | ಡಾ: ಎಂ.ಜಿ. ಜಯರಾಂ | -"- | | 25.04.52 | 25.07.82 | 06.11.97 | 13.02.91 | -"- |
| 35 | ಡಾ: ಸಿ.ಕೆ. ಮೂರ್ತಿ | -"- | | 20.10.57 | 15.03.82 | 16.01.95 | 13.02.91 | -"- |
| 36 | ವಿಚಿತ್ರಕುಮಾರ್ ಶೆಟ್ಟಿ | -"- | | 18.07.57 | 12.04.82 | 25.11.93 | 13.02.91 | -"- |
| 37 | ಗಂಗಾಧರ ವಿ. ಮಡ್ಡಿಕೇರಿ | -"- | | 22.06.57 | 12.03.82 | 25.11.93 | 13.02.91 | -"- |
| 38 | ಡಾ: ಎನ್.ಆರ್. ರಾಮಕೃಷ್ಣ | -"- | | 20.04.56 | 11.03.82 | 25.11.93 | 01.04.91 | -"- |
| 39 | ಯು. ರಾಮಚಂದ್ರ | -"- | | 17.03.56 | 15.03.82 | 25.11.93 | 03.07.91 | |
| 40 | ಆರ್.ಬಿ. ಯರಗಲ್ | -"- | | 01.05.55 | 20.04.82 | 25.11.93 | 09.07.91 | |
| 41 | ವೆಂಕಟೇಶಪ್ಪ ಟಿ. | -"- | | 08.05.56 | 31.03.82 | 25.11.93 | 10.07.91 | |
| 42 | ಡಾ: ಸಿ.ಎಸ್. ನಾಗರಾಜಯ್ಯ | -"- | | 22.03.56 | 31.03.82 | 21.07.94 | 16.10.91 | |
| 43 | ಸುರೇಶ್ ಕುಮಾರ್ | -"- | | 01.06.56 | 30.07.82 | 21.01.94 | 18.05.94 | |
| 44 | ಬಿ.ಆರ್. ಜಗದೀಶ್ | -"- | | 07.01.55 | 11.10.76 | 16.01.95 | 09.06.94 | |
| 45 | ಎಂ.ಡಿ. ಪ್ರಸಾದ್ | -"- | | 31.12.55 | 08.04.82 | 01.08.02 | 31.07.2002 | |
| 46 | ನಸೀಂ ಅಫ್ಸರ್ | -"- | | 15.05.57 | 01.04.82 | 01.08.02 | 31.07.2002 | |
| 47 | ಕೆ. ಗೋಪಾಲರೆಡ್ಡಿ | -"- | | 01.02.57 | 31.03.82 | 01.08.2002 | 31.07.2002 | |

ಡಿ. ಕಮಲಕುಮಾರ್

ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀನುಗಾರಿಕೆ).

ಪಿ.ಆರ್. 672

## ಶಿಕ್ಷಣ ಸಚಿವಾಲಯ

**ಸುತ್ತೋಲೆ ಸಂಖ್ಯೆ : ಇಡಿ 52 ಪಿಎಂಎ 2005, ಬೆಂಗಳೂರು, ದಿನಾಂಕ : 27ನೇ ಮೇ 2005**

**ವಿಷಯ :** ಬೆಂಗಳೂರು ನಗರದಲ್ಲಿ ಸಂಚಾರ ವ್ಯವಸ್ಥೆಯ ಸುಧಾರಣೆ ಕುರಿತಂತೆ ಶಾಲಾ ಮಕ್ಕಳು ಸಾರ್ವಜನಿಕ ವಾಹನಗಳನ್ನು ಬಳಸಿಕೊಳ್ಳುವ ದಿಸೆಯಲ್ಲಿ ಆಯ್ದ ಶಾಲಾ ಸಂಸ್ಥೆಗಳು ಶಾಲಾ ಶುಲ್ಕ ಪಾವತಿಯ ಜೊತೆಯಲ್ಲಿಯೇ ಬಸ್ ಬಳಕೆ ಶುಲ್ಕ ಸಂಗ್ರಹಿಸುವ ಬಗ್ಗೆ.

1. ಬೆಂಗಳೂರು ನಗರದಲ್ಲಿ ಸುರಕ್ಷಿತ ಸಂಚಾರ ವ್ಯವಸ್ಥೆಯನ್ನು ಜಾರಿಗೆ ತರುವ ಹಿತದೃಷ್ಟಿಯಿಂದ ಅಗತ್ಯವಾದ ವ್ಯವಸ್ಥೆಯನ್ನು ರೂಪಿಸಲು ಒಂದು ಟಾಸ್ಕ್ ಫೋರ್ಸ್ (Task Force) ನ್ನು ನೇಮಿಸಿದೆ. ಪ್ರಧಾನ ಕಾರ್ಯದರ್ಶಿಗಳು, ಒಳಾಡಳಿತ ಮತ್ತು ಸಾರಿಗೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಈ ಟಾಸ್ಕ್ ಫೋರ್ಸ್ (Task Force) ನ ಸಭೆ ದಿನಾಂಕ 14-03-2005ರಂದು ನಡೆದು ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡ ನಿರ್ಧಾರಗಳನ್ನು ಸದರಿ ಸಭೆಯಲ್ಲಿ ಕೈಗೊಳ್ಳಲಾಯಿತು.

**"V.No Parking around Schools;**

Chairman suggested that, BMTC and other buses should be used to transport children to school. To implement this policy, it is necessary to impose No Parking restriction around schools. Addl Commissioner of Police, Traffic, endorsed the view and stated that, 'No Parking' restriction will be imposed from the next academic year."

2. ಅದರಂತೆ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಇವರು ದಿನಾಂಕ 17.03.2005 ರಂದು ಸಭೆ ನಡೆಸಿ ಆಂಗ್ಲ ಮಾಧ್ಯಮ ಶಾಲೆಗಳು ಬೆಳಿಗ್ಗೆ ಬೇಗನೆ ಪ್ರಾರಂಭ ಮಾಡುವ ಬಗ್ಗೆ ಹಾಗೂ ಈ ದಿಸೆಯಲ್ಲಿ ಶಾಲಾ ಮಕ್ಕಳ ಅನುಕೂಲಕ್ಕಾಗಿ ಬಿ.ಎಂ.ಟಿ.ಸಿ.ಯವರು ಬಸ್ ಸೌಕರ್ಯ ಕಲ್ಪಿಸುವ ಹಾಗೂ ಇನ್ನಿತರೆ ವಿಷಯಗಳ ಬಗ್ಗೆ ಚರ್ಚಿಸಿ ನಿರ್ಧಾರ ಕೈಗೊಳ್ಳಲಾಯಿತು. ಈ ಹಿನ್ನೆಲೆಯಲ್ಲಿ ದಿನಾಂಕ 25.04.2005 ರ ಅಧಿಕೃತ ಜ್ಞಾಪನ ಸಂಖ್ಯೆ ಇಡಿ 52 ಪಿಎಂಎ 2005 ನ್ನು ಹೊರಡಿಸಲಾಗಿದೆ. ಅದರಲ್ಲಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

1. 2005-06ನೇ ಶೈಕ್ಷಣಿಕ ಸಾಲಿನಿಂದ ಸಿ.ಬಿ.ಎಸ್.ಇ/ಐ.ಸಿ.ಎಸ್.ಇ. ಶಾಲೆಗಳೂ ಸೇರಿದಂತೆ ರಾಜ್ಯ ಪಠ್ಯಕ್ರಮ ಪಾಲಿಸುವ ಎಲ್ಲ ಆಂಗ್ಲ ಮಾಧ್ಯಮ ಶಾಲೆಗಳನ್ನು ಬೆಳಿಗ್ಗೆ 8.30 ಗಂಟೆ ಅಥವಾ ಅದರೊಳಗೆ ಶಾಲೆಗಳನ್ನು ಪ್ರಾರಂಭಿಸಬೇಕು.
2. ಸದರಿ ಶಾಲೆಗಳ ಮಕ್ಕಳಿಗೆ ಶಾಲೆಗೆ ಬರಲು ಮತ್ತು ಮನೆಗೆ ಹೋಗುವುದಕ್ಕೆ ಶಾಲೆಯ ಆಡಳಿತವು ಅಗತ್ಯ ಬಸ್ಸಿನ ಏರ್ಪಾಡು ಮಾಡಬೇಕು. ಅಗತ್ಯವಿದ್ದಲ್ಲಿ ಬಿ.ಎಂ.ಟಿ.ಸಿ. ಬಸ್ ವ್ಯವಸ್ಥೆಯನ್ನು ಬಳಸಿಕೊಳ್ಳಬಹುದು.
3. ಬಸ್ಸಿನ ಚಾಲಕರಿಗೆ ಅಗತ್ಯ ಸುರಕ್ಷಾ ತರಬೇತಿ ನೀಡುವ ವ್ಯವಸ್ಥೆ ಸಹ ಮಾಡಬೇಕು.

3. ಇನ್ನು ಶಾಲಾ ಮಕ್ಕಳು ಸಾರ್ವಜನಿಕ ವಾಹನಗಳನ್ನು ಬಳಸಿಕೊಳ್ಳುವಂತೆ ಮನಒಲಿಸುವ ದೃಷ್ಟಿಯಿಂದ ಕೈಗೊಳ್ಳಬಹುದಾದ ಕ್ರಮದ ಬಗ್ಗೆ ಕಾರ್ಯದರ್ಶಿ, ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇಲಾಖೆ, ಇವರು ದಿನಾಂಕ 17.05.2005ರಂದು ಸಂಬಂಧಪಟ್ಟ ಎಲ್ಲರ ಸಭೆಯನ್ನು ಕೈಗೊಂಡರು. ಸದರಿ ಸಭೆಯಲ್ಲಿ ಆಂಗ್ಲ ಮಾಧ್ಯಮದ ಆಯ್ದ ಹದಿನಾರು ಶಾಲೆಗಳ ಪ್ರತಿನಿಧಿಗಳನ್ನೊಳಗೊಂಡಂತೆ ಪ್ರಾದೇಶಿಕ ಸಾರಿಗೆ ಇಲಾಖೆ ಅಧಿಕಾರಿಗಳು ಹಾಗೂ ಬಿ.ಎಂ.ಟಿ.ಸಿ. ಇಲಾಖೆಯ ಅಧಿಕಾರಿಗಳು ಭಾಗವಹಿಸಿದ್ದರು. ಈ ಆಯ್ದ ಶಾಲೆಗಳ ಸಮೀಪದ ಸಂಚಾರ ವ್ಯವಸ್ಥೆಯ ಕುರಿತಂತೆ ಹಾಗೂ ಈ ಶಾಲೆಯ ಮಕ್ಕಳನ್ನು ಕರೆ ತರಲು ಬಳಸಿಕೊಳ್ಳಲಾಗುತ್ತಿರುವ ಕಾರುಗಳ ಹಾಗೂ ದ್ವಿಚಕ್ರ ವಾಹನಗಳ ಸಂಪೂರ್ಣ ಸಮೀಕ್ಷೆಯನ್ನು ಸಾರಿಗೆ ಉಪ ಪೋಲೀಸ್ ಆಯುಕ್ತರು ಕೈಗೊಂಡಿದ್ದು, ಅದರ ವರದಿಗಳನ್ನು ಸರ್ಕಾರಕ್ಕೆ ನೀಡಿರುತ್ತಾರೆ. ಈ ವರದಿಗಳನ್ನು ಅವಗಾನಿಸಿದಲ್ಲಿ ಈ ಆಯ್ದ ಶಾಲೆಯ ಮಕ್ಕಳನ್ನು ಕರೆ ತರುವಲ್ಲಿ ಬಳಸಿಕೊಳ್ಳಲಾಗುತ್ತಿರುವ ಖಾಸಗಿ ವಾಹನಗಳಿಂದ ಶಾಲೆಯ ಸಮೀಪದ ಭಾಗದಲ್ಲಿ ಕ್ಲಿಷ್ಟಕರ ಸಂಚಾರ ವ್ಯವಸ್ಥೆಗೆ ನಿಶ್ಚಿತವಾಗಿಯೂ ಒಂದು ಕಾರಣ ಎಂಬುದು ಕಂಡು ಬಂದಿದೆ. ಆದುದರಿಂದ, ಬೆಂಗಳೂರು ನಗರದ ಈ ಹದಿನಾರು ಶಾಲೆಗಳ ಸಮೀಪ ಸಂಚಾರ ನಿರ್ವಹಣೆಯ ಸುಧಾರಣೆಗೆ ಸಂಬಂಧಿಸಿದಂತೆ ಶಾಲಾ ಮಕ್ಕಳು ಶಾಲೆಗೆ ಬರು ಹೋಗುವಲ್ಲಿ ಖಾಸಗಿ ವಾಹನಗಳ ಬಳಕೆಯನ್ನು ಕೈಬಿಟ್ಟು ಸಾರ್ವಜನಿಕ ವಾಹನಗಳನ್ನು ಬಳಸಿಕೊಳ್ಳುವುದು ಅತಿ ಅವಶ್ಯಕ ಎಂಬುದರ ಜೊತೆಗೆ ದಿನಾಂಕ 17.05.2005ರ ಸಭೆಯಲ್ಲಿ ಈ ಕೆಳಕಂಡ ಮುಖ್ಯ ಅಂಶಗಳ ಬಗ್ಗೆ ನಿರ್ಧಾರ ಕೈಗೊಳ್ಳಲಾಯಿತು.

ಅ. ಕಾರುಗಳು ಹಾಗೂ ದ್ವಿಚಕ್ರ ವಾಹನಗಳನ್ನು ಬಳಸಿಕೊಳ್ಳದಂತೆ ಶಾಲಾ ಮಕ್ಕಳನ್ನು ಮನಒಲಿಸಿ, ಸಾರ್ವಜನಿಕ ವಾಹನಗಳನ್ನು ಬಳಸಿಕೊಳ್ಳುವಂತೆ ಪ್ರೋತ್ಸಾಹಿಸುವುದು.

ಆ. ಕಾರುಗಳಲ್ಲಿ ಮತ್ತು ದ್ವಿಚಕ್ರ ವಾಹನಗಳಲ್ಲಿ ಶಾಲೆಗೆ ಬರು ಹೋಗುವ ಮಕ್ಕಳಿಂದ ಬಸ್ ಬಳಕೆ ಶುಲ್ಕವನ್ನು ಬೋಧನಾ ಶುಲ್ಕದೊಂದಿಗೆ ಸಂಗ್ರಹಿಸುವುದು.

ಇ. ಸೈಕಲ್, ಕಾಲ್ನಡಿಗೆ ಹಾಗೂ ಇತರೆ ಸಾರ್ವಜನಿಕ ವಾಹನಗಳ ಮೂಲಕ ಶಾಲೆಗೆ ಬರು ಹೋಗುವ ಮಕ್ಕಳನ್ನು ಬಸ್ ಬಳಕೆ ಶುಲ್ಕ ಸಂಗ್ರಹಣೆಯಿಂದ ವಿನಾಯಿತಿಗೊಳಿಸುವುದು.

ಈ. ಬಿ.ಎಂ.ಟಿ.ಸಿ. ಹಾಗೂ ಪೋಲೀಸ್ ಇಲಾಖೆ (ಸಾರಿಗೆ) ಅಧಿಕಾರಿಗಳು ಆಯ್ದ ಶಾಲಾ ಸಂಸ್ಥೆಗಳೊಂದಿಗೆ ಚರ್ಚಿಸಿ ಎಷ್ಟು ಬಸ್‌ಗಳ ಅವಶ್ಯಕತೆ ಇದೆ ಎಂಬ ಬಗ್ಗೆ ಹಾಗೂ ಸಂಚಾರಿ ರೂಟ್ ಹಾಗೂ ನಿಲುಗಡೆ ಸ್ಥಳಗಳನ್ನು ಗುರುತಿಸುವುದು. ಇದರಂತೆ ಶಾಲಾ ಆಡಳಿತ ಮಂಡಳಿಗಳು ಬಸ್‌ನ ವ್ಯವಸ್ಥೆ ಮಾಡುವುದು.

ಉ. ಈ ಆಯ್ದ ಶಾಲೆಗಳು ಪೋಷಕರ ಸಭೆಯನ್ನು ಕರೆದು ಮಕ್ಕಳು ಸಾರ್ವಜನಿಕ ವಾಹನಗಳನ್ನು ಬಳಸಿಕೊಳ್ಳುವಲ್ಲಿ ಇರುವ ಸದುಪಯೋಗದ ಬಗ್ಗೆ ಸವಿಸ್ತಾರವಾಗಿ ತಿಳಿಸಿ ಹೇಳುವುದು.

**ಊ.** ಈ ಎಲ್ಲಾ ನಿರ್ಧಾರಗಳನ್ನು ದಿನಾಂಕ 01-07-2005ರಿಂದ ಕಟ್ಟುನಿಟ್ಟಾಗಿ ಜಾರಿಗೆ ತರುವ ದೃಷ್ಟಿಯಿಂದ ಎಲ್ಲ ಪೂರ್ವಭಾವಿ ಸಿದ್ಧತೆಗಳನ್ನು ದಿನಾಂಕ 15-06-2005 ರ ಒಳಗೆ ಪೂರ್ತಿಗೊಳಿಸತಕ್ಕದ್ದು.

4. ಮೇಲ್ಕಂಡ ನಿರ್ಧಾರಗಳ ಬಗ್ಗೆ ಆಯ್ದ ಆಂಗ್ಲ ಭಾಷಾ ಶಾಲೆಗಳ ಪ್ರತಿನಿಧಿಗಳು ತಮ್ಮ ಸಹಮತಿಯನ್ನು ಸೂಚಿಸಿದರಲ್ಲದೇ (ಆ) ಭಾಗದಲ್ಲಿ ವಿವರಿಸಿದಂತೆ ಮಕ್ಕಳಿಂದ ಬಸ್ ಬಳಕೆ ಶುಲ್ಕವನ್ನು ಸಂಗ್ರಹಿಸುವ ವಿಚಾರವಾಗಿಯೂ ಸಹ ತಮ್ಮ ಸಮ್ಮತಿಯನ್ನು ವ್ಯಕ್ತಪಡಿಸಿದರು. ಆದರೆ, ಈ ವಿಚಾರವಾಗಿ ಸರ್ಕಾರದಿಂದ ಸೂಕ್ತ ನಿರ್ದೇಶನ ಅವಶ್ಯಕವೆಂದು ಅವರು ಅಭಿಪ್ರಾಯಿಸಿದರು.

5. ಮೇಲೆ ವಿವರಿಸಿದಂತೆ ಕೈಗೊಂಡ ನಿರ್ಧಾರಗಳ ಹಿನ್ನೆಲೆಯಲ್ಲಿ ಕರ್ನಾಟಕ ಶಿಕ್ಷಣ ಅಧಿನಿಯಮ, 1983 ರ ಕಲಂ 133 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಈ ಕೆಳಕಂಡಂತೆ ನಿರ್ದೇಶಿಸಲಾಗಿದೆ.

ಅ. ಬೆಂಗಳೂರು ನಗರದ ಅನುಬಂಧದಲ್ಲಿ ಲಗತ್ತಿಸಲಾದ ಹದಿನಾರು ಖಾಸಗಿ ಅನುದಾನರಹಿತ ಶಾಲೆಗಳು ಕಾರು ಹಾಗೂ ದ್ವಿಚಕ್ರ ವಾಹನಗಳಲ್ಲಿ ಶಾಲೆಗೆ ಬರುವ ಮಕ್ಕಳನ್ನು ಬಸ್ಸಿನ ಮೂಲಕ ಬರುವಂತೆ ಕಡ್ಡಾಯಗೊಳಿಸುವುದು. ಇದರ ಸಲುವಾಗಿ ಮಕ್ಕಳಿಂದ ಶಾಲಾ ಶುಲ್ಕ ಪಾವತಿಯ ಜೊತೆಯಲ್ಲಿಯೇ ಬಸ್ ಬಳಕೆ ಶುಲ್ಕವನ್ನು ಸಹ ಸಂಗ್ರಹಿಸುವುದು. ಅವರಿಗೆ ಮೇಲಿನಂತೆ ಸೂಕ್ತವಾದ ಬಸ್‌ನ ವ್ಯವಸ್ಥೆ ಮಾಡಿಸುವುದು.

ಆ. ಸೈಕಲ್, ಕಾಲ್ನಡಿಗೆ ಹಾಗೂ ಇತರೆ ಸಾರ್ವಜನಿಕ ವಾಹನಗಳ ಮೂಲಕ ಶಾಲೆಗೆ ಬರುಹೋಗುವ ವಿದ್ಯಾರ್ಥಿಗಳನ್ನು ಬಸ್ ಬಳಕೆ ಶುಲ್ಕ ಸಂಗ್ರಹಣೆಯಿಂದ ವಿನಾಯಿತಿಗೊಳಿಸಿದೆ.

ಇ. ಈ ವ್ಯವಸ್ಥೆಯು 01–07–2005 ರಿಂದ ಸಂಪೂರ್ಣವಾಗಿ ಜಾರಿಗೆ ಬರಬೇಕಿದ್ದು, ಅದಕ್ಕೆ ಮುಂಚಿತವಾಗಿ ಬಸ್ ಬಳಕೆ ಶುಲ್ಕವನ್ನು ಸಂಗ್ರಹಿಸತಕ್ಕದ್ದು.

**ಬಿ.ಹೆಚ್. ಪಡಸಲಗಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ಅನುಬಂಧ**

**(ಸುತ್ತೋಲೆ ಸಂಖ್ಯೆ ಇಡಿ 52 ಪಿಎಂಇ 2005, ದಿನಾಂಕ 27–05–2005)**

1. ಬಾಲ್ಡ್‌ವಿನ್ ಬಾಯ್ಸ್ ಶಾಲೆ, ಹೊಸೂರು ರಸ್ತೆ, ಬೆಂಗಳೂರು.
2. ಬಾಲ್ಡ್‌ವಿನ್ ಗರ್ಲ್ಸ್ ಶಾಲೆ, ರಿಚ್‌ಮಂಡ್ ರಸ್ತೆ, ಬೆಂಗಳೂರು.
3. ಬಿಷಪ್ ಕಾಟನ್ ಗರ್ಲ್ಸ್ ಶಾಲೆ, ಸಂತ ಮಾರ್ಕ್ಸ್ ರಸ್ತೆ, ಬೆಂಗಳೂರು.
4. ಬಿಷಪ್ ಕಾಟನ್ ಬಾಯ್ಸ್ ಶಾಲೆ, ರೆಸಿಡೆನ್ಸಿ ರಸ್ತೆ, ಬೆಂಗಳೂರು.
5. ಕೇಂದ್ರೀಯ ವಿದ್ಯಾಲಯ, ವಿಕ್ಟೋರಿಯಾ ರಸ್ತೆ, ಬೆಂಗಳೂರು.
6. ಸೇಕ್ರೇಡ್ ಹಾರ್ಟ್ ಪ್ರೌಢಶಾಲೆ, ರೆಸಿಡೆನ್ಸಿ ರಸ್ತೆ, ಬೆಂಗಳೂರು.
7. ಸಂತ ಮೀರಾ ಶಾಲೆ, ಕೇಂಬ್ರಿಡ್ಜ್ ರಸ್ತೆ, ಬೆಂಗಳೂರು.
8. ನ್ಯಾಷನಲ್ ಪಬ್ಲಿಕ್ ಶಾಲೆ, ಇಂದಿರಾನಗರ, ಬೆಂಗಳೂರು.
9. ಸೋಫಿಯಾ ಶಾಲೆ, ಪ್ಯಾಲೇಸ್ ರಸ್ತೆ, ಬೆಂಗಳೂರು.
10. ಸಂತ ಚಾರ್ಲ್ಸ್ ಶಾಲೆ, ಹೆಣ್ಣೂರು ರಸ್ತೆ, ಬೆಂಗಳೂರು.
11. ಸಂತ ಜಾನ್ಸ್ ಶಾಲೆ, ಪ್ರೋಮಿನೇಡ್ ರಸ್ತೆ, ಬೆಂಗಳೂರು.
12. ಗೂಡ್ಸ್ ಶೆಫರ್ಡ್ ಶಾಲೆ, ಕಾನ್ವೆಂಟ್ ರಸ್ತೆ, ಬೆಂಗಳೂರು.
13. ಸಂತ ಆನ್ಸ್ ಶಾಲೆ, ಮಿಲ್ಲರ್ ರಸ್ತೆ, ಬೆಂಗಳೂರು.
14. ಫ್ರಾನ್ಸಿಸ್ ಜೇವಿಯರ್ ಶಾಲೆ, ಪ್ರೋಮಿನೇಡ್ ರಸ್ತೆ, ಬೆಂಗಳೂರು.
15. ಫ್ರಾನ್ಸಿಸ್ ಆಂಥೋನಿ ಶಾಲೆ, ವೆಲ್ಲಿಂಗ್‌ಟನ್ ರಸ್ತೆ, ಬೆಂಗಳೂರು.
16. ಸಂತ ಜರ್ಮನ್ ಶಾಲೆ, ಪ್ರೋಮಿನೇಡ್ ರಸ್ತೆ, ಬೆಂಗಳೂರು.

**ಬಿ.ಹೆಚ್. ಪಡಸಲಗಿ**
ಪಿ.ಆರ್. 768 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್. ಪುಟ್ಟಸ್ವಾಮಿ, ಕೆ.ಎ.ಎಸ್. (ಸೂ.ಟೈಂ.ಶ್ರೇ) ಅಧಿಕಾರಿ, ಹಾಲಿ ಉಪ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿ, ಇವರು ಉಪಮುಖ್ಯಮಂತ್ರಿಯವರೊಂದಿಗೆ ಫಿಲಿಡೆಲ್ಫಿಯಾ ದಲ್ಲಿ ನಡೆಯಲಿರುವ Bio-2005 ವಾರ್ಷಿಕ ಅಂತರರಾಷ್ಟ್ರೀಯ ಸಮ್ಮೇಳನಕ್ಕೆ ಹೋಗಲು ಅನುಮತಿ ನೀಡುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಪಿಎಸ್‌ಸಿಎಂ 1161 2005, ದಿನಾಂಕ: 28.3.2005
2. ಶಾಖಾಧಿಕಾರಿ, Department of Economic Affairs, ನವದೆಹಲಿ, ಇವರ ಫ್ಯಾಕ್ಸ್ ಸಂದೇಶ ದಿನಾಂಕ 24.5.2005.
3. ಶಾಖಾಧಿಕಾರಿ, (ಸಮನ್ವಯ) ವಿದೇಶಿ ವ್ಯವಹಾರಗಳ ಮಂತ್ರಾಲಯ, ನವದೆಹಲಿ, ಇವರ ಕಛೇರಿ ಜ್ಞಾಪನಾ ಸಂಖ್ಯೆ: ಎಎ 122 4/2005 ದಿನಾಂಕ: 17.5.2005.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 28.3.2005 (ಕ್ರಮ ಸಂಖ್ಯೆ.1)ರ ಟಿಪ್ಪಣಿಯಲ್ಲಿ ಮುಖ್ಯಮಂತ್ರಿಯವರು ದಿನಾಂಕ 19.6.2005 ರಿಂದ 22.6.2005ರವರೆಗೆ ಫಿಲಿಡೆಲ್ಫಿಯಾದ ಹ್ಯಾರಿಸ್‌ಬರ್ಗ್‌ದಲ್ಲಿ ನಡೆಯಲಿರುವ ಬಯೋ-2005 ವಾರ್ಷಿಕ ಅಂತರಾಷ್ಟ್ರೀಯ ಸಮ್ಮೇಳನದಲ್ಲಿ ಭಾಗವಹಿಸಲು ಉಪಮುಖ್ಯಮಂತ್ರಿಯವರಿಗೆ ಹಾಗೂ ಅವರಿಗೆ ಸಹಕರಿಸುವ ಸಲುವಾಗಿ ಅವರೊಂದಿಗೆ ಪ್ರವಾಸ ಕೈಗೊಳ್ಳಲು ಅವರ ಆಪ್ತ ಕಾರ್ಯದರ್ಶಿಯಾದ ಶ್ರೀ ಎಸ್. ಪುಟ್ಟಸ್ವಾಮಿ, ಕೆ.ಎ.ಎಸ್, ಇವರಿಗೆ ಅನುಮತಿ ನೀಡಿರುವುದಾಗಿ ತಿಳಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ಮತ್ತು (3)ರಲ್ಲಿ ಓದಲಾದ ದಿನಾಂಕ: 17.5.2005 ಹಾಗೂ 24.5.2005ರ ಫ್ಯಾಕ್ಸ್ ಸಂದೇಶದಲ್ಲಿ ಶ್ರೀ ಎಸ್. ಪುಟ್ಟಸ್ವಾಮಿ, ಕೆ.ಎ.ಎಸ್. ಇವರ ಪ್ರಸ್ತಾಪಿತ ಪ್ರವಾಸಕ್ಕೆ ಭಾರತ ಸರ್ಕಾರದ ಹಣಕಾಸು ಮಂತ್ರಾಲಯ ಹಾಗೂ ವಿದೇಶಿ ವ್ಯವಹಾರಗಳ ಮಂತ್ರಾಲಯ ಅನುಮೋದಿಸಿದೆ ಎಂದು ತಿಳಿಸಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: 153 ಅಸೇಇ 2005, ಬೆಂಗಳೂರು, ದಿನಾಂಕ: 4ನೇ ಜೂನ್ 2005**

ಶ್ರೀ ಎಸ್. ಪುಟ್ಟಸ್ವಾಮಿ, ಕೆ.ಎ.ಎಸ್. (ಸೂ.ಟೈಂ.ಶ್ರೇ) ಅಧಿಕಾರಿ, ಹಾಲಿ ಉಪ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿ, ಇವರು ದಿನಾಂಕ 19.6.2005 ರಿಂದ 22.6.2005 ರವರೆಗೆ ಅಮೇರಿಕಾದ ಫಿಲಿಡೆಲ್ಫಿಯಾದ ಹ್ಯಾರಿಸ್‌ಬರ್ಗ್‌ದಲ್ಲಿ ನಡೆಯಲಿರುವ ಬಯೋ-2005 ವಾರ್ಷಿಕ ಅಂತರಾಷ್ಟ್ರೀಯ ಸಮ್ಮೇಳನದಲ್ಲಿ ಭಾಗವಹಿಸಲಿರುವ ಉಪ ಮುಖ್ಯಮಂತ್ರಿಯವರೊಂದಿಗೆ ಪ್ರವಾಸ ಕೈಗೊಳ್ಳಲು ಮಂಜೂರಾತಿ ನೀಡಲಾಗಿದೆ.

ಫಿಲಿಡೆಲ್ಫಿಯಾಕ್ಕೆ ಹೋಗಿ ಬರುವ ಪ್ರಯಾಣದ ಅವಧಿಯೂ ಸೇರಿದಂತೆ ಅಧಿಕಾರಿಯ ಪ್ರವಾಸದ ಪೂರ್ಣ ಅವಧಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸತಕ್ಕದ್ದು.

ದಿನಾಂಕ 20.4.2005ರ ಟಿಪ್ಪಣಿ ಸಂಖ್ಯೆ: ಆಇ 794 ವೆಚ್ಚ-5 2005ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಿದೆ.

ಪ್ರವಾಸದ ಅವಧಿಗೆ ಅಧಿಕಾರಿಯು ನಿಯಮಾನುಸಾರ ದಿನಭತ್ಯೆ ಮತ್ತು ಪ್ರಯಾಣ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 769

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-2)

**ಕಾನೂನು ಸಚಿವಾಲಯ**

**ವಿಷಯ:** ಶ್ರೀ ಕೆ.ಆರ್. ಪ್ರೇಮನಾಥ್, ನೋಟರಿ, ಹಿರಿಯೂರು ಚಿತ್ರದುರ್ಗ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಲಾ 193 ಎಲ್‌ಸಿಎಲ್ 1996, ದಿನಾಂಕ: 27.3,1997.
2. ನೋಟರಿಯವರ ಮನವಿ ದಿನಾಂಕ 23.10.2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ: 27.3.1997ರ ಸರ್ಕಾರಿ ಆದೇಶದಲ್ಲಿ ಶ್ರೀ ಕೆ.ಆರ್. ಪ್ರೇಮನಾಥ್, ನೋಟರಿ, ಹಿರಿಯೂರು, ಇವರನ್ನು ಹಿರಿಯೂರು ಕಂದಾಯ ತಾಲ್ಲೂಕಿಗೆ ನೋಟರಿಯಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ 23.10.04ರ ಮನವಿ ಪತ್ರದಲ್ಲಿ ಶ್ರೀ ಕೆ.ಆರ್. ಪ್ರೇಮನಾಥ್ ರವರು ವೈಯಕ್ತಿಕ ಕಾರಣಗಳಿಂದಾಗಿ ತಾವು ನೋಟರಿ ಹುದ್ದೆಗೆ ರಾಜೀನಾಮೆ ನೀಡುತ್ತಿರುವುದಾಗಿ ತಿಳಿಸಿ ಅದನ್ನು ಅಂಗೀಕರಿಸಲು ಕೋರಿರುತ್ತಾರೆ. ಆದ್ದರಿಂದ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 103 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 16ನೇ ಮೇ 2005**

ಶ್ರೀ ಕೆ.ಆರ್. ಪ್ರೇಮನಾಥ್, ನೋಟರಿ, ಹಿರಿಯೂರು ಇವರು ನೋಟರಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ:23.10.2004 ರಿಂದ ಜಾರಿಗೆ ಬರುವಂತೆ ಅಂಗೀಕರಿಸಲಾಗಿದೆ ಮತ್ತು ಸದರಿಯವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 759

**ಬಿ.ಎಸ್. ಈಶ್ವರಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಶ್ರೀ ಜೈ ಗಂಗಾಧರಯ್ಯ, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯಿತಿ, ಮಧುಗಿರಿ, ತುಮಕೂರು ಜಿಲ್ಲೆ ಇವರು ಲಂಚ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಬಲೆಗೆ ಬಿದ್ದಿರುವುದರಿಂದ ಸದರಿಯವರ ವಿರುದ್ಧ ವಿಚಾರಣೆ ನಡೆಸಲು ಪ್ರಕರಣವನ್ನು ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ - ಆದೇಶ.

**ಓದಲಾಗಿದೆ:** ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಇವರ ಪತ್ರ ಸಂಖ್ಯೆ: D.O. No. COMPT/UPLOK/BD/1819/2004/ DRE-1, ದಿನಾಂಕ: 4.3.2005.

**ಪ್ರಸ್ತಾವನೆ:**

ಶ್ರೀ ಡಿ. ರಾಮಕೃಷ್ಣಯ್ಯ ಬಿನ್ ದೊಡ್ಡಪ್ಪಯ್ಯ, ಯರ್ರಮಾರನಹಳ್ಳಿ, ಯಲಕೂರು ಪೋಸ್ಟ್, ಮಧುಗಿರಿ ತಾಲ್ಲೂಕು, ಇವರ ಚಿಕ್ಕಪ್ಪ ಶ್ರೀ ಹನುಮಂತಪ್ಪನಿಗೆ ಇಂದಿರಾ ಅವಾಜ್ ಯೋಜನೆಯಡಿ ಸರ್ಕಾರ ಮಂಜೂರು ಮಾಡಿದ ಮನೆ ನಿರ್ಮಾಣ ಮಾಡಲು ರೂ.10,000-00 ಗಳನ್ನು ಮಂಜೂರು ಮಾಡಿದ್ದು, ಅದರಲ್ಲಿ ಮೊದಲನೇ ಕಂತಿನಲ್ಲಿ ರೂ.8,500-00 ಗಳನ್ನು ಬಿಡುಗಡೆ ಮಾಡಿದ್ದು, ಸದರಿ ಮನೆಯ ಕಾಮಗಾರಿ ಪೂರ್ಣಗೊಂಡರೂ ಸಹ 2ನೇ ಕಂತಿನಲ್ಲಿ ಬಿಡುಗಡೆ ಆಗಬೇಕಾಗಿದ್ದ ರೂ.1,500-00 ಗಳನ್ನು ಬಿಡುಗಡೆಗೊಳಿಸಲು, ಮಧುಗಿರಿ ತಾಲ್ಲೂಕು ಪಂಚಾಯತ್‌ನ ಕಿರಿಯ ಇಂಜಿನಿಯರ್‌ರಾದ ಶ್ರೀ ಜೈ ಗಂಗಾಧರಯ್ಯ, ಇವರು ಶ್ರೀ ಡಿ. ರಾಮಕೃಷ್ಣಯ್ಯ ಇವರನ್ನು ರೂ.500-00 ಗಳ ಲಂಚ ಕೇಳಿದ್ದರಿಂದ, ಅವರು ಲಂಚ ಕೊಡಲು ನಿರಾಕರಿಸಿ, ಆ ಬಗ್ಗೆ ತುಮಕೂರು ಲೋಕಾಯುಕ್ತ ಪೊಲೀಸ್‌ಗೆ ನೀಡಿದ ದೂರಿನ ಮೇರೆಗೆ, ಸದರಿ ಲೋಕಾಯುಕ್ತ ಪೊಲೀಸರು ದೂರು ದಾಖಲಿಸಿಕೊಂಡು (ಸಂಖ್ಯೆ:ಸಿಆರ್ ನಂ.8/2001) ಶ್ರೀ ಜೈ ಗಂಗಾಧರಯ್ಯ, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯಿತಿ, ಮಧುಗಿರಿ, ಇವರು ಸದರಿ ಶ್ರೀ ಡಿ. ರಾಮಕೃಷ್ಣಯ್ಯ ರವರಿಂದ ದಿನಾಂಕ: 9.8.2001 ರಂದು ರೂ.500-00 ಗಳನ್ನು ಲಂಚ ಸ್ವೀಕರಿಸುತ್ತಿದ್ದ ಸಂದರ್ಭದಲ್ಲಿ ಲೋಕಾಯುಕ್ತ ಸಿಬ್ಬಂದಿಯ ಬಲೆಗೆ ಬಿದ್ದ ಪ್ರಯುಕ್ತ, ಕರ್ನಾಟಕ ಲೋಕಾಯುಕ್ತ ಕಾಯಿದೆ 1984 ಕಲಂ 12(3) ರನ್ವಯ ಈ ಪ್ರಕರಣದಲ್ಲಿ ಸರ್ಕಾರಕ್ಕೆ ಸಲ್ಲಿಸಿರುವ ವರದಿಯನ್ನು, ಸದರಿ ಆರೋಪಿತ ನೌಕರನು ಎಸಗಿರುವ ದುರ್ನಡತೆಗಾಗಿ ಅವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳಲು ಪ್ರಕರಣವನ್ನು ಉಪ ಲೋಕಾಯುಕ್ತಕ್ಕೆ ವಹಿಸಲು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದ್ದಾರೆ.

ಮಾನ್ಯ ಉಪ ಲೋಕಾಯುಕ್ತರ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಜೈ ಗಂಗಾಧರಯ್ಯ, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯಿತಿ, ಮಧುಗಿರಿ, ಇವರು ದುರ್ನಡತೆ ಎಸಗಿದ್ದಾರೆಂಬುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಈ ಪ್ರಕರಣದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ-11ರ ವಿಧಿ ವಿಧಾನಗಳನ್ವಯ ಇಲಾಖಾ ವಿಚಾರಣೆ ನಡೆಸಲು ಇದೇ ನಿಯಮಾವಳಿಯ ನಿಯಮ-14(ಎ) ರನ್ವಯ ಈ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತಕ್ಕೆ ವಹಿಸಲು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 10 ಇಎನ್‌ಕ್ಯೂ 05, ಬೆಂಗಳೂರು, ದಿನಾಂಕ: 31ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಜೈ ಗಂಗಾಧರಯ್ಯ, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತಿ, ಮಧುಗಿರಿ, ಇವರು ಶ್ರೀ ರಾಮಕೃಷ್ಣಯ್ಯ, ಯರ್ರಮಾರನಹಳ್ಳಿ ಇವರಿಂದ ರೂ. 500-00 ಗಳ ಅಕ್ರಮ ಸಂಭಾವನೆ ಪಡೆದಿದ್ದಾರೆಂದು ಕರ್ನಾಟಕ ನಾಗರೀಕ

ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ-11ರ ವಿಧಿ ವಿಧಾನಗಳನ್ವಯ ಇಲಾಖಾ ವಿಚಾರಣೆ ನಡೆಸಲು ಇದೇ ನಿಯಮಾವಳಿಯ-14(ಎ) ರನ್ವಯ ಈ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ಸರ್ಕಾರವು ವಹಿಸಲು ಆದೇಶಿಸಿದೆ.

ಸದರಿ ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಪೂರ್ಣಗೊಳಿಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಮುಂದಿನ ಕ್ರಮಕ್ಕಾಗಿ ಸಲ್ಲಿಸುವಂತೆ ಕೋರಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಸಿ. ಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 760

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಸುರೇಶ್ ಬಸರಕೋಡ್, ವೈದ್ಯಾಧಿಕಾರಿ, ಸ.ಆ.ಕೇಂದ್ರ, ಹುನಗುಂದ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಆಕುಕ 122 ಹೆಚ್‌ಎಸ್‌ಹೆಚ್ 2004 ದಿ: 16.2.04.
2. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ (2) ಬೆಂವಿ : ಬಾ: 20: 2004-05 ದಿನಾಂಕ: 2.12.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಡಾ: ಸುರೇಶ್ ಬಸರಕೋಡ್, ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೇಮಕಾತಿ ಹೊಂದಿರುತ್ತಾರೆ. ಸದರಿ ಅಧಿಸೂಚನೆಯನ್ವಯ ದಿನಾಂಕ: 9.3.2004 ರಂದು ಸಮುದಾಯ ಆರೋಗ್ಯ ಕೇಂದ್ರ, ಹುನಗುಂದ, ಬಾಗಲಕೋಟೆ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿ, ತದನಂತರ ದಿನಾಂಕ: 10.3.2004 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಸದರಿ ವೈದ್ಯರು ಖಾಯಂಪೂರ್ವ ಸೇವಾವಧಿಯಲ್ಲಿ ಇರುವಾಗಲೇ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದರಿಂದ ಖಾಯಂಪೂರ್ವ ಸೇವಾ ನಿಯಮಗಳಡಿಯಲ್ಲಿ ಸೇವೆಯಿಂದ ವಿಮೋಚನೆಗೊಳಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸರ್ಕಾರವು ಆಯುಕ್ತರು, ಆಕುಕ ಸೇವೆಗಳು ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 210 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 13ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಸುರೇಶ್ ಬಸರಕೋಡ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಹುನಗುಂದ, ಬಾಗಲಕೋಟೆ ಜಿಲ್ಲೆ ಇವರು ದಿನಾಂಕ: 10.3.2004 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 10.3.2004 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6 ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಸ್. ಜಗದೀಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 762

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಜಿ.ಎಂ. ರಾಮಚಂದ್ರಪ್ಪ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ವಿರುದ್ಧ ಶಿಸ್ತು ಕ್ರಮ ಕುರಿತು - ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ಪತ್ರಸಂಖ್ಯೆ:ಸಿಎಫ್‌ಎಸ್:ಇಎಸ್‌ಟಿ(2)10: 2000-01, ದಿನಾಂಕ:6.11.2000.
2. ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆನಾಸ 293 ಆಇಸೇ 2000, ದಿನಾಂಕ:4.6.2001.
3. ಶ್ರೀ ಜಿ.ಎಂ. ರಾಮಚಂದ್ರಪ್ಪ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ಲಿಖಿತ ಹೇಳಿಕೆ ದಿನಾಂಕ 13.6.2001.
4. ಸರ್ಕಾರಿ ಆದೇಶ ಸಂಖ್ಯೆ: ಆನಾಸ 293 ಆಇಸೇ 2000, ದಿನಾಂಕ:17.10.2001 ಮತ್ತು 29.8.2002.
5. ಆಯುಕ್ತರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ಪತ್ರಸಂಖ್ಯೆ:ಸಿಎಫ್‌ಎಸ್:ಇಎಸ್‌ಟಿ(2)10: 2000-01, ದಿನಾಂಕ:30.1.2003.
6. ಶ್ರೀ ಜಿ.ಎಂ. ರಾಮಚಂದ್ರಪ್ಪ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ರಕ್ಷಣಾ ಹೇಳಿಕೆ ದಿನಾಂಕ 23.4.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆಯುಕ್ತರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರ ಪತ್ರದಲ್ಲಿ ಶ್ರೀ ಜಿ.ಎಂ. ರಾಮಚಂದ್ರಪ್ಪ, ಅಂದಿನ ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಹಾವೇರಿ ಇವರು 1999ರ ಡಿಸೆಂಬರ್ ಮಾಹೆಗೆ ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿಯಲ್ಲಿ ಹಾವೇರಿ ಜಿಲ್ಲೆಗೆ ಹಂಚಿಕೆಯಾದ ಅಕ್ಕಿಯ ಬಾಬ್ತು ಎತ್ತುವಳಿ ಮಾಡದೆ ಲ್ಯಾಪ್ಸ್ ಮಾಡಿರುವುದಾಗಿ ತಿಳಿಸಿ 4 ಗುರುತರ ಆರೋಪಗಳ ಪಟ್ಟಿಯನ್ನು ಸಿದ್ದಪಡಿಸಿ ಕಳುಹಿಸಿರುತ್ತಾರೆ.

ಈ ಆರೋಪಕ್ಕಾಗಿ ಮೇಲೆ (2)ರಲ್ಲಿ ಓದಲಾದ ತಿಳುವಳಿಕೆ ಪತ್ರದಲ್ಲಿ ಶ್ರೀ ಜಿ.ಎಂ. ರಾಮಚಂದ್ರಪ್ಪ ಅಂದಿನ ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಹಾವೇರಿ ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ ನಿಯಮ 1957ರ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11ರಡಿಯಲ್ಲಿ ದೋಷಾರೋಪಣಾ ಪಟ್ಟಿಯನ್ನು ಸಿದ್ದಪಡಿಸಿ ಜಾರಿಮಾಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಲಿಖಿತ ಹೇಳಿಕೆಯಲ್ಲಿ ಶ್ರೀ ಜಿ.ಎಂ. ರಾಮಚಂದ್ರಪ್ಪ, ಅಂದಿನ ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಹಾವೇರಿ ಇವರು ಅವರ ಮೇಲಿನ 4 ಆರೋಪಗಳನ್ನೂ ನಿರಾಕರಿಸಿರುತ್ತಾರೆ. ಈ ಲಿಖಿತ ಹೇಳಿಕೆಗಳನ್ನು ಸರ್ಕಾರವು ಪರಿಶೀಲಿಸಿ ಅದು ಸಮರ್ಪಕವಲ್ಲವೆಂದು ಪರಿಗಣಿಸಿದ ಕಾರಣ, ಮೇಲೆ ಓದಲಾದ (4)ರ ದಿನಾಂಕ:17.10.2001ರ ಆದೇಶದಲ್ಲಿ ಇಲಾಖಾ ವಿಚಾರಣೆ ನಡೆಸಲು

ಆಯುಕ್ತರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ದಿನಾಂಕ:29.8.2002ರ ಆದೇಶದಲ್ಲಿ ಅಪರ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣಾಧಿಕಾರಿಗಳು ದಿನಾಂಕ: 30.1.2003ರಂದು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ಕೆಳಕಂಡ ಆರೋಪಗಳು ಸಾಬೀತಾಗಿರುವುದಾಗಿ ವರದಿ ಮಾಡಿರುತ್ತಾರೆ.

**ಆರೋಪ-1:**

ಆರೋಪಿತ ಅಧಿಕಾರಿಯು 1999ರ ಡಿಸೆಂಬರ್ ಮಾಹೆಯಲ್ಲಿ ಎತ್ತುವಳಿ ಮಾಡಲಾದ 3273ಕ್ವಿಂಟಾಲ್ ಅಕ್ಕಿಯ ಬದಲಾಗಿ 4476.95 ಕ್ವಿಂಟಾಲ್ ಹೆಚ್ಚುವರಿ ಅಕ್ಕಿಯನ್ನು ಬಿಡುಗಡೆ ಮಾಡಲು ಈ ಅಕ್ಕಿಯನ್ನು ಇಬಿಪಿಎಲ್‌ಗೆ ಪರಿವರ್ತಿಸಿಕೊಂಡ ಬಗ್ಗೆ ವರದಿ ಸಲ್ಲಿಸಿ ಇಂತಹ ಕ್ರಮದಿಂದ 1052 ಕ್ವಿಂಟಾಲ್ ಬಿಪಿಎಲ್ ಅಕ್ಕಿಯನ್ನು ಇಬಿಪಿಎಲ್‌ಗೆ ಪರಿವರ್ತಿಸಿಕೊಳ್ಳಲು ಆಸ್ಪದವಾಗಿದ್ದು, ಇದರಿಂದಾಗಿ ಸರ್ಕಾರಕ್ಕೆ ಆಹಾರ ಸಹಾಯಧನ ರೂಪದಲ್ಲಿ ರೂ.5.89 ಲಕ್ಷಗಳು ನಷ್ಟ ಉಂಟುಮಾಡಿರುವುದಾಗಿ ವಿಚಾರಣಾ ವರದಿಯಲ್ಲಿ ತಿಳಿಸಿ ಆರೋಪಿತ ಅಧಿಕಾರಿಯು ಇದಕ್ಕೆ ಕಾರಣವೆಂದು ಈ ರೀತಿ ಸರ್ಕಾರಕ್ಕೆ ನಷ್ಟವುಂಟಾಗಿರುವುದು ರುಜುವಾತಾಗಿದೆ.

**ಆರೋಪ-2:**

ಆರೋಪಿತ ಅಧಿಕಾರಿಯು 1999ರ ಡಿಸೆಂಬರ್ ಮಾಹೆಯಲ್ಲಿ ಲ್ಯಾಪ್ಸ್ ಆದ ಅಕ್ಕಿಯ ಪ್ರಮಾಣವನ್ನು ಸರಿದೂಗಿಸಲು ಹೆಚ್ಚುವರಿ ಪ್ರಮಾಣದ ಅಕ್ಕಿಗಾಗಿ ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ಅಕ್ಕಿಯು ನಿಗದಿತ ಅವಧಿಯಲ್ಲಿ ವಿತರಣೆಯಾಗದೇ ಇರುವ ಬಗ್ಗೆ ಖಚಿತಪಡಿಸಿಕೊಳ್ಳದೆ 2004 ಮಾರ್ಚ್‌ಗೆ ಮುಂದುವರಿಸಿ ದುರುಪಯೋಗಕ್ಕೆ ಅವಕಾಶ ಮಾಡಿಕೊಟ್ಟಿರುವುದು ಸಾಬೀತಾಗಿರುತ್ತದೆ.

**ಆರೋಪ-3:**

ಆಪಾದಿತ ಅಧಿಕಾರಿಯು 1999 ಡಿಸೆಂಬರ್ ಮತ್ತು 2000ನೇ ಜನವರಿ ಮಾಹೆಯಲ್ಲಿ ಸಗಟು ಮಳಿಗೆಗಳನ್ನು ತಪಾಸಣೆ ಮಾಡಿರುವುದಾಗಿ ತಿಳಿಸಿರುವುದು ನಿಜವಾದಲ್ಲಿ ಸಗಟು ಮಳಿಗೆಗಳಿಗೆ ಆಹಾರ ಧಾನ್ಯಗಳ ಯಾವುದೇ ಭೌತಿಕ ದಾಸ್ತಾನು ಇಲ್ಲದೇ ಇರುವುದರಿಂದ, ಅಕ್ಕಿಯನ್ನು ವಿತರಿಸಿದಂತೆ ತೋರಿಸಿರುವುದರಿಂದ ನಿಜವಾಗಿಯೂ ತಪಾಸಣೆ ಮಾಡದೇ ಕರ್ತವ್ಯ ನಿರ್ಲಕ್ಷ್ಯತೆವೆಸಗಿರುವುದು ಸಾಬೀತಾಗಿರುತ್ತದೆ.

**ಆರೋಪ-4:**

ಆಪಾದಿತ ಅಧಿಕಾರಿಯು ಉಪನಿರ್ದೇಶಕರಾಗಿ ಉದ್ದೇಶಪೂರ್ವಕವಾಗಿ ಕಂಡರೂ ಕಾರಣದಂತೆ ಒಳಸಂಚಿನ ಮೂಲಕ ಅಥವಾ ನಿರ್ಲಕ್ಷ್ಯತೆ ಅಥವಾ ಅಜ್ಞಾನದ ಮೂಲಕ ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಬಿಡುಗಡೆಯಾದ ಅಕ್ಕಿಯು ದುರುಪಯೋಗವಾಗಿರುವುದು ಸಾಬೀತಾಗಿರುತ್ತದೆ.

ಈ 4 ಆರೋಪಗಳು ವಿಚಾರಣಾ ವರದಿಯಲ್ಲಿ ಸಾಬೀತಾಗಿದೆಯೆಂಬ ಕಾರಣಗಳಿಂದ ಅವುಗಳನ್ನು ಒಪ್ಪಿ ಅವರ ಹೇಳಿಕೆಯನ್ನು ಪಡೆಯಲು ವರದಿಯ ಪ್ರತಿಯನ್ನು ಆರೋಪಿ ಅಧಿಕಾರಿಗೆ ಕಳುಹಿಸಲಾಗಿತ್ತು. ಆರೋಪಿತ ಅಧಿಕಾರಿಯು ಮೇಲೆ ಓದಲಾದ (6)ರಲ್ಲಿ ರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿ ಈ 4 ಆರೋಪಗಳನ್ನು ನಿರಾಕರಿಸಿರುತ್ತಾರೆ. ಅಲ್ಲದೆ ಉತ್ತಮ ರೀತಿಯಲ್ಲಿ ಕಾರ್ಯ ನಿರ್ವಹಿಸಲು ಅವಕಾಶ ಮಾಡಿಕೊಡಬೇಕಾಗಿ ಕೋರಿರುತ್ತಾರೆ. ಸರ್ಕಾರವು ಈ ಉತ್ತರವನ್ನು ಪರಿಶೀಲಿಸಿ ಅದರಲ್ಲಿ ಪರಿಗಣಿಸುವ ಅಂಶಗಳಿಲ್ಲವೆಂದು ಆಪಾದಿತ ಅಧಿಕಾರಿಯ ಉತ್ತರವನ್ನು ತಳ್ಳಿಹಾಕಿದೆ.

ಸರ್ಕಾರವು ವಿಚಾರಣಾ ವರದಿ, ಸಂಬಂಧಿಸಿದ ದಾಖಲೆಗಳು ಆರೋಪಿತ ಅಧಿಕಾರಿಯು ನೀಡಿರುವ ಹೇಳಿಕೆ ಇತ್ಯಾದಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 293 ಆಇಸೇ 2000, ಬೆಂಗಳೂರು, ದಿನಾಂಕ: 2ನೇ ಜೂನ್ 2005**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8 (iiiಎ)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಶ್ರೀ ಜಿ.ಎಂ. ರಾಮಚಂದ್ರಪ್ಪ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರಿಗೆ ಮುಂದಿನ ಹುದ್ದೆಯ ಪದೋನ್ನತಿಯನ್ನು ತಡೆಹಿಡಿಯಲು ಆದೇಶಿಸಿದೆ. ಅಲ್ಲದೆ ಅದೇ ನಿಯಮ 8(iv) ರನ್ವಯ ಈ ಅಧಿಕಾರಿಯ ನಿರ್ಲಕ್ಷ್ಯತೆಯಿಂದಾಗಿ ಸರ್ಕಾರಕ್ಕೆ ರೂ.5.89 ಲಕ್ಷಗಳನ್ನು (ಐದು ಲಕ್ಷದ ಎಂಬತ್ತೊಂಬತ್ತು ಸಾವಿರ ರೂಪಾಯಿಗಳು ಮಾತ್ರ) ನಷ್ಟ ಉಂಟುಮಾಡಲು ಕಾರಣರಾಗಿರುವುದರಿಂದ, ಸದರಿ ನಷ್ಟದ ಹಣವನ್ನು ಈ ಅಧಿಕಾರಿಯ ವೇತನದಿಂದ ವಸೂಲಿ ಮಾಡಲು ಆದೇಶಿಸಿದೆ.

ಈ ಬಗ್ಗೆ ಆಯುಕ್ತರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು ಇವರು ಪ್ರತ್ಯೇಕ ಲೆಕ್ಕ ನಿರ್ವಹಿಸಿ ಪೂರ್ಣವಸೂಲಿಯನ್ನು ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 764

**ಶಿಕ್ಷಣ ಸಚಿವಾಲಯ**

**ಸುತ್ತೋಲೆ ಸಂಖ್ಯೆ ಇಡಿ 83 ಪಿಜಿಸಿ 2005, ಬೆಂಗಳೂರು, ದಿನಾಂಕ: 1ನೇ ಜೂನ್ 2005**

**ವಿಷಯ:** ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ದೈಹಿಕ ಶಿಕ್ಷೆಯನ್ನು ನಿಷಿದ್ಧಗೊಳಿಸುವ ಕುರಿತು.

ಸರ್ಕಾರಿ ಹಾಗೂ ಖಾಸಗಿ ಶಿಕ್ಷಣ ಸಂಸ್ಥೆಗಳು ನಡೆಸುತ್ತಿರುವ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿನ ಶಿಕ್ಷಕರು ವಿದ್ಯಾರ್ಥಿಗಳಿಗೆ ದೈಹಿಕ ಶಿಕ್ಷೆ ನೀಡುತ್ತಿದ್ದಾರೆ ಎಂಬ ದೂರುಗಳು ಸರ್ಕಾರದ ಗಮನಕ್ಕೆ ಬಂದಿವೆ.

2. ಶಾಲೆಗಳಲ್ಲಿ ಅಂತಹ ದೈಹಿಕ ಶಿಕ್ಷೆ ನೀಡುವುದು ಮಕ್ಕಳ ಮಾನಸಿಕ ಹಾಗೂ ಶೈಕ್ಷಣಿಕ ಬೆಳವಣಿಗೆ ದೃಷ್ಟಿಯಿಂದ ಸೂಕ್ತವಲ್ಲ. ದೈಹಿಕ ಶಿಕ್ಷೆ ನೀಡುವ ಅಹಿತಕರ ಘಟನೆಗಳು ಮರುಕಳಿಸದಂತೆ ಸೂಕ್ತ ಎಚ್ಚರಿಕೆ ವಹಿಸುವುದು ಶಿಕ್ಷಣ ಇಲಾಖೆಯ ಜವಾಬ್ದಾರಿಯುತ ಕರ್ತವ್ಯವಾಗಿರುತ್ತದೆ.

3. ಈ ಹಿನ್ನೆಲೆಯಲ್ಲಿ ಕರ್ನಾಟಕ ಶಿಕ್ಷಣ ಅಧಿನಿಯಮ 1983ರ ಕಲಂ 133(2) ಮತ್ತು (3)ದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಕರ್ನಾಟಕ ರಾಜ್ಯದ ಖಾಸಗಿ ಮತ್ತು ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ದೈಹಿಕ ಶಿಕ್ಷೆ ವಿಧಿಸುವುದನ್ನು ಈ ಮೂಲಕ ನಿಷೇಧಿಸಿ ಆದೇಶಿಸಿದೆ.

4. ಇಂತಹ ಘಟನೆಗಳು ಬೆಳಕಿಗೆ ಬಂದಲ್ಲಿ, ಶಿಕ್ಷಣ ಇಲಾಖೆಯ ಸಕ್ಷಮ ಪ್ರಾಧಿಕಾರಿಗಳು ಕೂಡಲೇ ಸಂಬಂಧಿಸಿದ ಶಿಕ್ಷಕರ ಹಾಗೂ ಶಿಕ್ಷಣ ಸಂಸ್ಥೆಗಳ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳತಕ್ಕದ್ದು.

**ಬಿ.ಹೆಚ್. ಪಡಸಲಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

ಪಿ.ಆರ್. 765

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರ ಗ್ರಾಮದ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಮಾಡಿಕೊಳ್ಳಲಾದ ಭೂಸ್ವಾಧೀನದ ನ್ಯಾಯಾಲಯ ಪ್ರಕರಣಗಳಲ್ಲಿ ಉಚ್ಚ ನ್ಯಾಯಾಲಯದ ಆದೇಶದಂತೆ ಪರಿಹಾರ ಮೊತ್ತದ ಶೇ.50 ರಷ್ಟನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರದ ಸಂಖ್ಯೆ: ಮುಇಂ/ಸನೀ/ಬಿಜೆಪಿ/ಭೂಸ್ವಾ ಕಮತನೂರು/04-05.

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರು ಗ್ರಾಮದ ಬಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಮಾಡಿಕೊಳ್ಳಲಾದ ಭೂಸ್ವಾಧೀನದ ಹೆಚ್ಚಿನ ಪರಿಹಾರ ಧನದ ವಿಷಯದಲ್ಲಿ ಮಾನ್ಯ ಉಚ್ಚನ್ಯಾಯಾಲಯವು ಎಂ.ಎಫ್.ಎ. ಪ್ರಕರಣಗಳಲ್ಲಿ ನೀಡಿರುವ ಆದೇಶದಂತೆ ಪರಿಹಾರ ಮೊತ್ತದ ಶೇಕಡ 50ರಂತೆ 6 ಎಂಎಫ್ಎ ಪ್ರಕರಣಗಳಿಗೆ ಒಟ್ಟು ರೂ.941583-00ಗಳನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡುವ ಸಲುವಾಗಿ ಬಿಡುಗಡೆ ಮಾಡಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಬೆಳಗಾವಿ ಜಿಲ್ಲೆ, ಹುಕ್ಕೇರಿ ತಾಲ್ಲೂಕಿನ ಕಮತನೂರ ಗ್ರಾಮದ ಹದ್ದಿಯಲ್ಲಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿದ್ದ ಜಮೀನುಗಳ ಸ್ವಾಧೀನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ: 27.8.1992 ರಂದು ಮತ್ತು 6(1)ರ ಅಧಿಸೂಚನೆಯನ್ನು ದಿನಾಂಕ:18.3.1993 ರಂದು ಹೊರಡಿಸಲಾಗಿದೆ. ಭೂಪರಿಹಾರ ಮೊತ್ತದ ಐತೀರ್ಪನ್ನು ಉಪ ವಿಭಾಗಾಧಿಕಾರಿ ಮತ್ತು ಭೂಸ್ವಾಧೀನಾಧಿಕಾರಿಗಳು ಬೆಳಗಾವಿ ಉಪ ವಿಭಾಗ, ಬೆಳಗಾಂ ಇವರು ದಿನಾಂಕ 28.3.1995 ರಂದು ನೀಡಿರುತ್ತಾರೆ. ಐತೀರ್ಪಿನಂತೆ ಪರಿಹಾರಧನ ಪಡೆದ ಭೂಮಾಲೀಕರಲ್ಲಿ ಕೆಲವರು ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹೆಚ್ಚಿನ ಪರಿಹಾರಕ್ಕಾಗಿ ಹುಕ್ಕೇರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ), ಹುಕ್ಕೇರಿ ಇಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿ (ಎಲ್.ಎ.ಸಿ. ಸಂ:11/98, 73/01, 83/01, 85/01, 120/01 ಮತ್ತು 121/01) ನ್ಯಾಯಾಲಯದಿಂದ ಹೆಚ್ಚಿನ ಪರಿಹಾರ ಧನದ ಆದೇಶ ಪಡೆದಿದ್ದು, ಈ ಆದೇಶಗಳ ವಿರುದ್ಧ ಭೂಸ್ವಾಧೀನಾಧಿಕಾರಿಗಳು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿಗಳನ್ನು (ಎಂಎಫ್ಎ) ದಾಖಲಿಸಿದ್ದು, ಈ ಮೇಲ್ಮನವಿಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿಸಿರುವ ಪರಿಹಾರ ಮೊತ್ತದ ಶೇ.50ರಷ್ಟನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡುವ ಷರತ್ತಿಗೊಳಪಟ್ಟು ಉಚ್ಚ ನ್ಯಾಯಾಲಯವು ಮೇಲ್ಮನವಿಯನ್ನು ವಿಚಾರಣೆಗೆ ಅಂಗೀಕರಿಸಲು ಒಪ್ಪಿ ಸಿವಿಲ್ ನ್ಯಾಯಾಲಯದ ಆದೇಶಕ್ಕೆ ತಡೆಯಾಜ್ಞೆ ನೀಡಿದೆ.

ಮಾನ್ಯ ಉಚ್ಚನ್ಯಾಯಾಲಯದ ಆದೇಶದಂತೆ ಈ ಭೂಸ್ವಾಧೀನ ಪ್ರಕರಣಗಳಲ್ಲಿ ಠೇವಣಿ ಮಾಡಬೇಕಾದ ಶೇಕಡ 50ರಷ್ಟು ಪರಿಹಾರಧನದ ಬಗ್ಗೆ ಲೆಕ್ಕ ಹಾಕಿದ್ದು ಅದರಂತೆ ಪ್ರಕರಣಾವಾರು ವಿವರ ಈ ಕೆಳಕಂಡಂತಿದೆ:

| ಕ್ರ. ಸಂ. | ಎಲ್.ಎ.ಸಿ. ಸಂಖ್ಯೆ | ಎಂ.ಎಫ್.ಎ. ಸಂಖ್ಯೆ | ಸಿವಿಲ್ ನ್ಯಾಯಾಲಯವು ಹೆಚ್ಚಿಸಿರುವ ಪರಿಹಾರ ಮೊತ್ತದ ಶೇ.50ರಷ್ಟು (ರೂ.ಗಳಲ್ಲಿ) |
|---|---|---|---|
| 1 | 11/98 | 3259/04 | 4,11,457.00 |
| 2 | 73/01 | 7598/04 | 26,70,867.00 |
| 3 | 83/01 | 3262/04 | 1,33,645.00 |
| 4 | 85/01 | 7591/04 | 3,16,867.00 |
| 5 | 120/01 | 3255/04 | 1,92,192.00 |
| 6 | 121/01 | 3252/04 | 2,16,555.00 |
| | | **ಒಟ್ಟು** | **39,41,583.00** |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 68 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 30ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ ಹುಕ್ಕೇರಿ ತಾಲ್ಲೂಕಿನ ಕಮತನೂರು ಗ್ರಾಮದ ಹದ್ದಿಯಲ್ಲಿ ಸಣ್ಣನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಭೂಸ್ವಾಧೀನ (ಎಂ.ಎಫ್.ಎ) ಪ್ರಕರಣಗಳಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ನೀಡಿರುವ ತಡೆಯಾಜ್ಞೆಯಂತೆ 6 ಪ್ರಕರಣಗಳಿಗೆ ಸೇರಿ ಒಟ್ಟು ಭೂಪರಿಹಾರ ಧನ ಮೊತ್ತದ ಶೇ.50ರಷ್ಟು ಅಂದರೆ ರೂ.39,41,583-00 (ಮೂವತ್ತೊಂಭತ್ತು ಲಕ್ಷ ನಲವತ್ತೊಂದು ಸಾವಿರದ ಐದುನೂರ ಎಂಭತ್ತೂ್ಮರು ರೂ.ಗಳು ಮಾತ್ರ) ಗಳನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ "4702-00-800-1-00ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ-132 ಬಂಡವಾಳ ವೆಚ್ಚಗಳು" ಅಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ: 12.6.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎನ್. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 766

## LABOUR SECRETARIAT

**Sub:** Constitution of Institute Management Committee Inrespect of Govt. ITI, Gulbarga.

**Read:**
1. D.O. Letter No.DGE&T-35(4)(2)/2004-PCT/CPIU, dated:11.2.2005 from the Govt. of India, Ministry of Labour & Employment, New Delhi.
2. Letter No.DET/TRG/T-1/CR-2/2005-06, dated 5.5.2005 from the Director, Employment & Training, B'lore.

**Preamble:-**

In D.O. letter read at (1) above, the Govt. of India has requested to constitute an Institute of Management Committee in respect of upgraded I.T.I.s.

The Director, Employment & Training has sent proposed for Constitution of Institute Management Committee in respect of Govt. I.T.I. Gulbarga.

The proposal has been examined.

**Govt. Order No. LD 142 FTI 2005(6), Bangalore, Dated: 18th May 2005**

The Institute Management Committee in respect of Govt. I.T.I., Gulbarga is constituted consisting the following members.

| | | |
|---|---|---|
| 1. | Representative from Rajashree Cement Ltd., Malkerl. Gulbarga. | Chairman. |
| 2. | Representative from Zindal Vijayanagar Steels Ltd., Hospet. | Member |
| 3. | Representative from Kirloskar Alloy & Ferrous Industries Ltd., Gulbarga. | Member |
| 4. | Representative from Raichur Thermal Power Corpn.Ltd.Shakthi Nagar, Raichur. | Member |
| 5. | Sri Suresh G.Nandiyal,President,Hyderabad Karnataka Chamber of Commerce and Industry, Gulbarga. | Member |
| 6. | Joint Director, Divisional Office, Gulbarga. | Member |
| 7. | District Employment Officer, Gulbarga. | Member |
| 8. | Training Officer (Sr.) of the ITI, Gulbarga. | Member |
| 9. | Student Representative, ITI, Tumkur Road, Gulbarga. | Member |
| 10. | Joint Director, Industries & Commerce, Gulbarga. | Member |
| 11. | Principal, Govt.ITI, Gulbarga. | Convenor |

The term of the Committee will be for a period of 2 years and the Committee meets once in 2 months.

**The roles and responsibilities of IMC is as under:**

a) Generation revenue through various means such as projects from industry and to use these funds as decided by them.
b) forecast of new emerging training areas
c) Development of curriculum
d) Selection of trainees
e) Training of trainers
f) Appointment of Contract faculty/Guest faculty
g) On the job training
h) Testing and certification
i) Placement of trainees passing out.

By Order and in the name of the Governor of Karnataka,

P.R. 767

**G.N. LAKSHMIPATHY**

Deputy Secretary to Government, Labour Department.

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ಕೃಷ್ಣಾ ಮೇಲ್ದಂಡೆ ಯೋಜನೆಯ ಶಹಾಪುರ ಶಾಖಾ ಕಾಲುವೆಯ ವಿತರಣಾ ಕಾಲುವೆ ನಂ.4 ಕಿ.ಮೀ 0.00 ರಿಂದ ಕಿ.ಮೀ 3.00 ವರೆಗಿನ ನಿರ್ಮಾಣ ಕೆಲಸದ (ಉಳಿಕೆ ಕೆಲಸ)- ಎ.ಸಿ.ನಂ. 4/1993 ಗುತ್ತಿಗೆಯ ಏಕ ಮಧ್ಯಸ್ಥಿಕೆದಾರರ ಐತೀರ್ಪನ್ನು ಒಪ್ಪಿಕೊಳ್ಳುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ನೀಇ 106 ಡಬ್ಲ್ಯೂಯುಸಿ 89, ದಿ: 1.10.96

2. ವ್ಯವಸ್ಥಾಪಕ ನಿರ್ದೇಶಕರು, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ, ಆಲಮಟ್ಟಿ ಅವರ ಪತ್ರದ ಸಂಖ್ಯೆ: ಕಂಕಾ/444/ಉ/2003-04/1009/ಅಡಕ, ದಿ:17.11.2003.

**ಪ್ರಸ್ತಾವನೆ:**

ಕೃಷ್ಣಾ ಮೇಲ್ದಂಡೆ ಯೋಜನೆ ಶಹಾಪುರ ಶಾಖಾ ಕಾಲುವೆಯ ವಿತರಣಾ ಕಾಲುವೆ ನಂ.4 ಕಿ.ಮೀ 0.00 ಯಿಂದ 3.00 ವರೆಗಿನ ನಿರ್ಮಾಣ (ಉಳಿಕೆ ಕೆಲಸ) ಕೆಲಸವನ್ನು ಎಲ್‌ಸಿಬಿ ಗುತ್ತಿಗೆ ಆಧಾರದ ಮೇಲೆ ಶ್ರೀ ಬಿ. ವೇಣುಗೋಪಾಲರೆಡ್ಡಿ ಅವರಿಗೆ 1.5.87ರಲ್ಲಿ ಟೆಂಡರ್ ಮೊತ್ತ ರೂ.5,39,549 ಅಂದರೆ ಅಂದಾಜು ಮೊತ್ತ (ಎಸ್.ಆರ್.86-87)ಕ್ಕಿಂತ 8.95% ಅಧಿಕ, ವಹಿಸಿಕೊಡಲಾಗಿತ್ತು ಹಾಗೂ ಕರಾರಿನಂತೆ 31.7.87ರಲ್ಲಿ ಕೆಲಸ ಮುಗಿಸಬೇಕಾಗಿದ್ದಿತು. ಆದರೆ ಗುತ್ತಿಗೆದಾರರು ಈ ಕೆಳಕಂಡ ಕಾರಣಗಳಿಂದ ನಿಗದಿತ ಸಮಯದಲ್ಲಿ ಕೆಲಸ ಮುಗಿಸಲಾಗಲಿಲ್ಲ.

i) ಭೂಮಿಯನ್ನು ಹಸ್ತಾಂತರಿಸಲು ಆದ ವಿಳಂಬ.
ii) ಜೂನ್ ಮತ್ತು ಜುಲೈ 87ರಲ್ಲಿ ವಿತರಣಾ ಕಾಲುವೆಯಲ್ಲಿ ನೀರನ್ನು ಬಿಡುವಿಕೆಯಿಂದ ಆದ ವಿಳಂಬ.
iii) ಇಲಾಖೆಯು ಒದಗಿಸಬೇಕಾಗಿದ್ದ ಸುಮಾರು 7000 ಪಿ.ಸಿ.ಪಿ ಸ್ಲಾಬ್ ಮತ್ತು ಲಗ್ಸ್‌ಗಳನ್ನು ಸಕಾಲದಲ್ಲಿ ಒದಗಿಸುವಲ್ಲಿ ಆದ ವಿಳಂಬ.
iv) ಸರಿಯಾದ ಸಮಯದಲ್ಲಿ ಸಿದ್ಧತೆಗಾಗಿ ಮುಂಗಡ ಹಣವನ್ನು ಕೊಡುವಿಕೆಯಲ್ಲಿ ಆದ ವಿಳಂಬ.

ಹೀಗಾಗಿ ಗುತ್ತಿಗೆದಾರರು ಹಲವು ಬೇಡಿಕೆಗಳನ್ನು ಇಲಾಖೆಯ ಮುಂದೆ ಇಟ್ಟು ಅವುಗಳನ್ನು ಇತ್ಯರ್ಥಗೊಳಿಸಲು ಏಕಮಧ್ಯಸ್ಥಿಕೆದಾರರನ್ನು ನೇಮಿಸಲು ಕೇಳಿಕೊಂಡ ಪ್ರಯುಕ್ತ ಶ್ರೀ ಟಿ.ಜಿ. ರಾಧಾಕೃಷ್ಣ, ಅಂದಿನ ಮುಖ್ಯ ಅಭಿಯಂತರರು, ಹೇಮಾವತಿ ಅಣೆಕಟ್ಟು ವಲಯ, ಗೋರೂರು ಅವರನ್ನು 20.12.89ರಲ್ಲಿ ನೇಮಿಸಲಾಯಿತು. ಏಕಮಧ್ಯಸ್ಥಿಕೆದಾರರು 28.1.93ರಲ್ಲಿ ಐತೀರ್ಪನ್ನು ನೀಡಿರುತ್ತಾರೆ ಹಾಗೂ ಅದನ್ನು ಸಿವಿಲ್ ನ್ಯಾಯಾಲಯ, ಯಾದಗೀರ್‌ನಲ್ಲಿ ನ್ಯಾಯಾಲಯದ ಕಾನೂನು ಎಂದು ಘೋಷಿಸಿ ತೀರ್ಪು ಮತ್ತು ಡಿಕ್ರಿ ನೀಡುವಂತೆ ಕೋರಿದ್ದರು.

ಐತೀರ್ಪನ್ನು ವಿವರವಾಗಿ ಪರಿಶೀಲಿಸಿದ ಇಲಾಖೆಯ ಕಾನೂನು ಸಲಹೆಗಾರರಾದ ಶ್ರೀ ಎ.ಕೆ. ಚನ್ನೇಗೌಡರು ದಿ: 9.3.93ರಂದು ಐತೀರ್ಪನ್ನು ಇಲಾಖೆ ಒಪ್ಪಿಕೊಳ್ಳಬಹುದೆಂದು ತಿಳಿಸಿರುತ್ತಾರೆ. 19.2.94ರಲ್ಲಿ ನ್ಯಾಯಾಲಯವು ತೀರ್ಪು ನೀಡಿ 25.2.94ರಲ್ಲಿ ಡಿಕ್ರಿ ಹೊರಡಿಸಿರುತ್ತದೆ.

ಕಾನೂನು ಇಲಾಖೆಯು ತನ್ನ ಆದೇಶ ಸಂಖ್ಯೆ: ಎಲ್‌ಎಡಬ್ಲ್ಯೂ 236 ಎಲ್‌ಎಸ್‌ಜಿ 93 ದಿ:23.8.94ರಲ್ಲಿ ಐತೀರ್ಪಿನ ವಿರುದ್ಧ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಲು ತೀರ್ಪು ನೀಡಿರುತ್ತದೆ.

ದಿ: 26.6.95 ರಂದು ರಾಜ್ಯದ ಉಚ್ಚನ್ಯಾಯಾಲಯವು ಸರ್ಕಾರದ ಅರ್ಜಿಯನ್ನು ತಿರಸ್ಕರಿಸಿರುತ್ತದೆ ಹಾಗೂ ಕಾನೂನು ಇಲಾಖೆಯ ಪತ್ರ ಸಂಖ್ಯೆ: ಎಲ್‌ಎಡಬ್ಲ್ಯೂ 236 ಎಲ್‌ಎಸ್‌ಜಿ ದಿ:11.8.95ರ ಪ್ರಕಾರ ಇಲಾಖೆಯು ಉಚ್ಚ ನ್ಯಾಯಾಲಯದಲ್ಲಿ ನ್ಯಾಯಾಲಯದ ತೀರ್ಪನ್ನು ಕಾರ್ಯಾಚರಣೆ ಹಾಗೂ ಜಾರಿಗೆ ತರುವುದನ್ನು ತಡೆಹಿಡಿಯಲು ಸಿಆರ್‌ಪಿ ಯನ್ನು ದಾಖಲಿಸಿರುತ್ತದೆ.

ದಿ: 31.7.96 ರಂದು ಉಚ್ಚ ನ್ಯಾಯಾಲಯವು ಆದೇಶ ಸಂಖ್ಯೆ: ಸಿಆರ್‌ಪಿ ಸಂ.2332/96ರಲ್ಲಿ ಎಸಿ ನಂ.4/93ಗೆ ನೀಡಿದ್ದ ಆದೇಶವನ್ನು/ ತೀರ್ಪನ್ನು ಕಾರ್ಯಾಚರಣೆ ಹಾಗೂ ಜಾರಿಗೆ ತರುವುದನ್ನು ತಡೆಹಿಡಿಯುವ ಬಗ್ಗೆ ನೀರಾವರಿ ಇಲಾಖೆಯು ಎಂಟು ವಾರಗಳಲ್ಲಿ ಅಂದರೆ

8.10.96ರೊಳಗೆ ಐತೀರ್ಪಿನಂತೆ ಲೆಕ್ಕಾಚಾರ ಮಾಡಿರುವ ಮೊತ್ತದಲ್ಲಿ ಶೇ.50% ಮೊತ್ತವನ್ನು ಕೆಳಗಿನ ನ್ಯಾಯಾಲಯದಲ್ಲಿ ಠೇವಣಿ ಇಡತಕ್ಕದ್ದು ಎಂಬ ಷರತ್ತಿನೊಂದಿಗೆ ಜಪ್ತಿ ಆದೇಶ ಹೊರಡಿಸಲಾಗಿತ್ತು. ಅದರಂತೆ ಐತೀರ್ಪಿನ ಮೊತ್ತವಾದ ರೂ.24,09,459ರಲ್ಲಿ ಶೇ. 50% ಅಂದರೆ 12,04,730.00 (ಹನ್ನೆರಡು ಲಕ್ಷದ ನಾಲ್ಕು ಸಾವಿರದ ಏಳುನೂರು ಮೂವತ್ತು ರೂ.ಗಳು ಮಾತ್ರ)ನ್ನು ಸಿವಿಲ್ ನ್ಯಾಯಾಲಯ, ಯಾದಗೀರ್‌ನಲ್ಲಿ ಠೇವಣಿ ಇಡಲು ಆದೇಶಿಸಲಾಗಿತ್ತು.

ನಂತರ ಅಂತಿಮವಾಗಿ ಉಚ್ಛನ್ಯಾಯಾಲಯವು ಸದರಿ ಪ್ರಕರಣವನ್ನು ದಿ:24.2.2003ರಂದು ಆಲಿಸಿ ದಿ:19.2.94ರಂದು ದಾಖಲೆ ಮಾಡಲಾಗಿದ್ದ ಸಿಆರ್‌ಪಿ ನಂ.2332/96ನ್ನು ರದ್ದುಗೊಳಿಸಿ ಮಧ್ಯಸ್ಥಿಕೆದಾರರು ನೀಡಿದ್ದ ಅವಾರ್ಡನ್ನು ಅಂತಿಮವೆಂದು ತೀರ್ಪು ನೀಡಿತು. ಕಾನೂನು ಇಲಾಖೆಯ ಪತ್ರದ ಸಂಖ್ಯೆ: ಎಲ್‌ಎಡಬ್ಲ್ಯೂ 914 ಎಲ್‌ಎಸ್‌ಪಿ 2003, ದಿ:19.7.2003ರಲ್ಲಿ ಮರು ಪ್ರಶ್ನಿಸುವ ಪ್ರಸ್ತಾಪವನ್ನು ದಾಖಲು ಮಾಡುವ ಅಗತ್ಯವಿಲ್ಲವೆಂಬ ಅಭಿಪ್ರಾಯವನ್ನು ನೀಡಿತು. ಅದರಂತೆ, ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸದರಿ ಪ್ರಕರಣದಲ್ಲಿ ಗುತ್ತಿಗೆದಾರರಿಗೆ ಅಸಲು ಹಾಗೂ ನ್ಯಾಯಾಲಯ ತೀರ್ಮಾನಿಸಿದ ಬಡ್ಡಿ ದರದಂತೆ ದಿ:31.10.2003ವರೆಗೆ ಒಟ್ಟು ರೂ.16,40,604.00 ಲೆಕ್ಕಾಚಾರ ಮಾಡಿ ಮುಖ್ಯ ಲೆಕ್ಕಾಧಿಕಾರಿ, ಆಲಮಟ್ಟಿ ಅವರ ಮೇಲು ರುಜುವಿನೊಂದಿಗೆ ಸಲ್ಲಿಸಿರುತ್ತಾರೆ.

ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ನ್ಯಾಯಾಲಯದ ತೀರ್ಪಿನಂತೆ ದಿ: 31.10.2003ರವರೆಗೆ ಶೇಕಡ 18ರ ಬಡ್ಡಿಯ ದರದಲ್ಲಿ ಲೆಕ್ಕ ಹಾಕಿ ರೂ.16,40,604.00 ಗಳ ದೃಢೀಕರಿಸಿ ಆರ್ಥಿಕ ಹೊಣೆಗಾರಿಕೆ ಪಟ್ಟಿಯನ್ನು ನಿಗಮದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಕಳುಹಿಸಿ ನಿಗಮದಿಂದಲೇ ಭರಿಸಲು ಆದೇಶವನ್ನು ಹೊರಡಿಸಲು ಕೋರಿರುತ್ತಾರೆ. ಸರ್ಕಾರವು ವ್ಯವಸ್ಥಾಪಕ ನಿರ್ದೇಶಕರು, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 13 ಡಬ್ಲ್ಯೂಯುಸಿ 2003, ಬೆಂಗಳೂರು, ದಿನಾಂಕ: 24ನೇ ಮೇ 2005**

ಕೃಷ್ಣಾ ಮೇಲ್ದಂಡೆ ಯೋಜನೆ, ಶಹಾಪುರ ಶಾಖಾ ಕಾಲುವೆಯ ವಿತರಣಾ ಕಾಲುವೆ ನಂ.4 ರ ಕಿ.ಮೀ 0.00 ರಿಂದ 3.00 ವರೆಗಿನ ನಿರ್ಮಾಣ ಕೆಲಸ ಉಳಿಕೆ ಕೆಲಸದ ಗುತ್ತಿಗೆಗೆ ಸಂಬಂಧಿಸಿದಂತೆ, ಏಕ ಮಧ್ಯಸ್ಥಿಕೆದಾರರಾದ ಶ್ರೀ ಟಿ.ಜಿ. ರಾಧಾಕೃಷ್ಣ ರವರು ನೀಡಿರುವ ಐತೀರ್ಪಿನಲ್ಲಿ ಯಾದಗೀರ್ ಸಿವಿಲ್ ನ್ಯಾಯಾಲಯವು 4/93ರಲ್ಲಿ ನೀಡಿರುವ ತೀರ್ಪನ್ನು ಉಚ್ಛನ್ಯಾಯಾಲಯವು ಸಿಆರ್‌ಪಿ 2332/96, ದಿ:31.7.96ರಲ್ಲಿ ನೀಡಿರುವ ಆದೇಶದಂತೆ ಸರ್ಕಾರದ ಆದೇಶದ ಸಂಖ್ಯೆ: ನೀಇ 106 ಡಬ್ಲ್ಯೂಯುಸಿ 89, ದಿ: 1.10.96ರಂತೆ ನ್ಯಾಯಾಲಯದಲ್ಲಿ ದಿ:26.6.96ರವರೆಗೆ ಬಡ್ಡಿ ಲೆಕ್ಕಾಚಾರ ಮಾಡಿ, ಒಟ್ಟು ಮೊತ್ತ ರೂ.24,09,459ರಲ್ಲಿ ಶೇ. 50 ಅಂದರೆ ರೂ.12,04,730ಗಳನ್ನು ಸಿವಿಲ್ ನ್ಯಾಯಾಲಯ ಯಾದಗಿರ್‌ನಲ್ಲಿ ಠೇವಣಿ ಇಡಲಾಯಿತು. ನಂತರ ಉಚ್ಛನ್ಯಾಯಾಲಯವು ದಿ:24.2.2003ರಂದು ನೀಡಿರುವ ಆದೇಶದಲ್ಲಿ ಮಧ್ಯಸ್ಥಿಕೆದಾರರ ಐತೀರ್ಪನ್ನು ಎತ್ತಿಹಿಡಿದ ಕಾರಣ ವ್ಯವಸ್ಥಾಪಕ ನಿರ್ದೇಶಕರು, ಕೃಷ್ಣಾ ಭಾಗ್ಯ ಜಲ ನಿಗಮರವರು ಸಲ್ಲಿಸಿರುವ ಆರ್ಥಿಕ ಹೊಣೆಗಾರಿಕೆಯಂತೆ ದಿ:31.10.2003ವರೆಗೆ ಭವಿಷ್ಯ ಬಡ್ಡಿಯನ್ನು ಶೇ. 12 ರಂತೆ ಲೆಕ್ಕಾಚಾರ ಮಾಡಿದ್ದಲ್ಲಿ ಒಟ್ಟು ರೂ.16,40,604 ಪಾವತಿಸಬೇಕಾಗಿದ್ದು, ಈ ಮೊತ್ತದಲ್ಲಿ ಭದ್ರತಾ ಠೇವಣಿಯ ಮೇಲೆ ವಿಧಿಸಿರುವ ಬಡ್ಡಿ ಮೊತ್ತ ರೂ.1,97,918ಗಳನ್ನು ಹೊರತುಪಡಿಸಿ ಉಳಿದ ರೂ.14,42,686ಗಳನ್ನು ಮಾತ್ರ (ಕೃಷ್ಣಾ ಮೇಲ್ದಂಡೆ ಯೋಜನೆಗೆ ಸಂಬಂಧಿಸಿದಂತೆ ಎಲ್ಲಾ ಆಸ್ತಿ ಮತ್ತು ಹೊರೆಯನ್ನು ಕೃಷ್ಣಾ ಭಾಗ್ಯ ಜಲ ನಿಗಮಕ್ಕೆ ಹಸ್ತಾಂತರಿಸಿರುವುದರಿಂದ) ಗುತ್ತಿಗೆದಾರರಿಗೆ ಕೃಷ್ಣಾ ಭಾಗ್ಯ ಜಲ ನಿಗಮ ವತಿಯಿಂದ ಪಾವತಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಡಿ. ಧಮನ್**

ಪಿ.ಆರ್. 758

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),
ಜಲ ಸಂಪನ್ಮೂಲ ಇಲಾಖೆ (ಕೃಭಾಜನಿನಿ ವಿ.ಕೋಶ)

**ಆರ್ಥಿಕ ಸಚಿವಾಲಯ**

**ಆದೇಶ ಸಂಖ್ಯೆ: ಆಇ (ವಿಶೇಷ) 10 ಪಿಇಟಿ 2005, ಬೆಂಗಳೂರು, ದಿನಾಂಕ: 25ನೇ ಮೇ 2005**

**ವಿಷಯ:** ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ತುಟ್ಟಿಭತ್ಯೆ ದರಗಳ ಪರಿಷ್ಕರಣೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಆಇ (ವಿಶೇಷ) 12 ಪಿಇಟಿ 2004, ದಿನಾಂಕ: 10.11.2004.

ರಾಜ್ಯದ ಸಂಚಿತ ನಿಧಿಯಿಂದ ನಿವೃತ್ತಿ ವೇತನ ಮತ್ತು ಕುಟುಂಬ ನಿವೃತ್ತಿ ವೇತನವನ್ನು ಪಡೆಯುತ್ತಿರುವಂತಹ ರಾಜ್ಯ ಸರ್ಕಾರದ ನಿವೃತ್ತಿ ವೇತನದಾರರಿಗೆ ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತಿ ವೇತನದಾರರು ಮತ್ತು ಕುಟುಂಬ ನಿವೃತ್ತಿ ವೇತನದಾರರಿಗೆ ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇಕಡ 64 ರಷ್ಟಿರುವ ತುಟ್ಟಿಭತ್ಯೆ ದರವನ್ನು ಶೇಕಡ 67ಕ್ಕೆ ದಿನಾಂಕ: 1.1.2005 ರಿಂದ ಜಾರಿಗೆ ಬರುವಂತೆ ಹೆಚ್ಚಿಸಿ ಮಂಜೂರು ಮಾಡಲಾಗಿದೆ.

2. ಈ ಆದೇಶದಿಂದಾಗಿ ಪಾವತಿಸಬೇಕಾದ ತುಟ್ಟಿಭತ್ಯೆಯ ಮೊತ್ತದಲ್ಲಿ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಶಗಳನ್ನು ಕಡೆಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಪುಷ್ಪರಾಣಿ**

ವಿಶೇಷಾಧಿಕಾರಿ (ವಿಶ್ರಾಂತಿ ವೇತನ) ಆರ್ಥಿಕ ಇಲಾಖೆ.

**FINANCE SECRETARIAT**

**Order No. FD(SPL) 10 PET 2005, Bangalore, Dated: 25th May 2005**

**Sub:** Dearness Allowance to Pensioners/Family Pensioners-revision of rates.

**Read:** G.O.No.FD (Spl) 12 PET 2004, dated: 10.11.2004.

Government are pleased to sanction increase in the rates of Dearness Allowance from existing 64% to 67% of basic pension/family pension to the State Government Pensioners/Family Pensioners and the pensioners and family pensioners of the Aided Educational Institutions whose pension/family pension is paid out of the Consolidated Fund of the State, with effect from 1.1.2005.

2. The payment on account of the increase in Dearness Allowance as per these orders involving fractions of 50 paise and above shall be rounded off to the next rupee and fractions less than 50 paise shall be ignored.

By Order and in the name of the Governor of Karnataka,

**P. PUSHPA RANI**

P.R. 771

Special Officer (Pension) Finance Department.